# ಮಾನಸಿ

ತಿಂಗಳ ಪತ್ರಿಕೆ ಸೆಪ್ಟೆಂಬರ್ 1994



ಆಧುನಿಕ ಕನ್ನಡ ಕಾವ್ಯದಲ್ಲಿ ಮಹಿಳೆ

ಜನಪದ ತ್ರಿಪದಿಗಳಲ್ಲಿ ಹೆಣ್ಣು

ಪಿತೃ ಪ್ರಧಾನತೆ ಎಂದರೇನು ?

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 9 ಸಂಚಿಕೆ : 8

ಸೆಪ್ಟೆಂಬರ್ - 1994

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067

**ಸಂಪರ್ಕ ವಿಳಾಸ**

ನಂ. 457, 12ನೇ ಅಡ್ಡರಸ್ತೆ,
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು–560 086

ಸೂಚನೆ : ಬಿಡಿ ಪ್ರತಿ : **3-00 ರೂ.**
ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ...**



ಈ ಸಂಚಿಕೆಗೆ ಲೇಖನಗಳನ್ನು ಒದಗಿಸಿದವರು

**ನೆಂ. ವನಜಾ**


ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



# ಸಂಪಾದಕೀಯ

"**ಪಿತೃ ಪ್ರಧಾನತೆ** ಚಾರಿತ್ರಿಕವಾಗಿ ಬೆಳೆದು ಬಂದ ವ್ಯವಸ್ಥೆ. ಬೇರೆ ಬೇರೆ ಚಾರಿತ್ರಿಕ ಸಂದರ್ಭಗಳಲ್ಲಿ ಪುರುಷರು ಸ್ತ್ರೀಯರನ್ನು ನಿಯಂತ್ರಿಸಿಟ್ಟುಕೊಳ್ಳುವ ಪ್ರಯತ್ನದ ಪ್ರಕ್ರಿಯೆಯ ಫಲವೇ ಹೊರತು ಅದೊಂದು ಸಹಜ ಸ್ಥಿತಿಯೇನಲ್ಲ. ಚರಿತ್ರೆಯಲ್ಲಿಯೇ ಅದರ ಪ್ರಾರಂಭವಿರುವದಾದರೆ ಚಾರಿತ್ರಿಕ ಪ್ರಕ್ರಿಯೆಯಿಂದಲೇ ಅದರ ಅಂತ್ಯವೂ ಸಾಧ್ಯ" ಎಂಬುದು ಸ್ತ್ರೀವಾದೀ ವಿದ್ವಾಂಸರು ಅಂತಿಮವಾಗಿ ಪಡುವ ಅಭಿಪ್ರಾಯ. ಅಂತೂ ಪಿತೃಪ್ರಧಾನ ವ್ಯವಸ್ಥೆಯನ್ನು ಬದಲಿಸುವುದು ಸಾಧ್ಯ ಎಂಬುದು ಒಟ್ಟಾರೆಯಾದ ಅನಿಸಿಕೆ. ನಮ್ಮಲ್ಲಿನ ಮಹಿಳಾ ಅಂದೋಲನಗಳು ಇದೇ ನಂಬಿಕೆಯನ್ನೇ ಆಧಾರವಾಗಿರಿಸಿ ಕ್ರಿಯಾಶೀಲಗೊಂಡಿರುವುದು ಕಂಡುಬರುತ್ತದೆ. ಈ ಅಂದೋಲನದ ದಿಕ್ಕುಗಳು ಹಲವಾರು ಮತ್ತು ಕಾರ್ಯಶೀಲತೆ ಬೇರೆ ಬೇರೆ ಸ್ತರಗಳದ್ದು. ಒಟ್ಟಾರೆಯಲ್ಲಿ ಇವೆಲ್ಲದರ ನೆಲೆ ಒಂದು ನಿರ್ದಿಷ್ಟ ಸಾಂಸ್ಕೃತಿಕ ಸನ್ನಿವೇಶವಾಗಿದ್ದು, ಸಂಸ್ಕೃತಿಯ ಕಟು ಟೀಕೆಯಿಂದಲೇ ಹೊಮ್ಮುವ ಪ್ರತಿಭಟನೆಗಳಿವು ಎನ್ನುವುದು ಸ್ಪಷ್ಟ.

ಹೀಗಿದ್ದೂ 'ಮಹಿಳಾ ಚಳುವಳಿಗಳು' ಸಾಂಸ್ಕೃತಿಕ ಪ್ರಜ್ಞೆಯಿಂದ ಪ್ರತಿಭಟಿಸುತ್ತಿಲ್ಲ; ನಮ್ಮ ಸಾಂಸ್ಕೃತಿಕ ಸಂದರ್ಭ ಬೇರೆ, ಪಶ್ಚಿಮವು ಹೇರುವ ಹುಸಿ ಸಾರ್ವತ್ರಿಕತೆಯಿಂದ ಕೂಡಿದ ಯಾವುದೇ ಪರಿಕಲ್ಪನೆಗಳನ್ನು ನಾವು ಒಪ್ಪಲಾಗದು' ಎಂದೆಲ್ಲ ಸ್ತ್ರೀಪರ ಕಳಕಳಿಯುಳ್ಳ ಕೆಲವರು ವಾದಿಸುವುದುಂಟು. ಇರಬಹುದು, ಮೊದಲಿಗೆ ಸ್ತ್ರೀವಾದವೆನ್ನುವುದು ಪಶ್ಚಿಮದಿಂದ ಹುಟ್ಟಿ ಬಂದಿರಬಹುದು. ಆದರೆ ಅದನ್ನೇ ಕಾರಣವಾಗಿಸಿಕೊಂಡ ಇಂತಹ ಹೆಚ್ಚು ಹುರುಳಿಲ್ಲದ ಟೀಕೆಗಳನ್ನು ಅನುಮಾನದಿಂದಲೇ ನೋಡಬೇಕಾಗುತ್ತದೆ. ಇಲ್ಲಿ ಪಶ್ಚಿಮದ ವಿಚಾರಗಳ ಪ್ರಭಾವವಿದೆಯೆನ್ನುವುದು ನಿಜ. ಯಾವುದೇ ಸಾಂಸ್ಕೃತಿಕ ಸಂದರ್ಭದ ಪರಿಣಾಮಕಾರೀ ಟೀಕೆಯನ್ನು ಕಟ್ಟಲು ಬೇರೆ ಬೇರೆ ವಿಚಾರಧಾರೆಗಳ ಸಹಾಯ ಪಡಕೊಳ್ಳುವುದರಲ್ಲಿ ಏನು ತಪ್ಪು ? ಪಶ್ಚಿಮದ ಚಿಂತನೆಗಳ ಮಾನದಂಡದಿಂದಲೇ ಎಲ್ಲವನ್ನು ಅಳೆಯಲು ಪ್ರಾರಂಭಿಸಿದಾಗ ಮಾತ್ರ ಈ ಇರುಸು-ಮುರುಸು, ಆತಂಕಗಳು ಪ್ರಾರಂಭವಾಗುವುದು. ಅಷ್ಟಕ್ಕೂ "ನನಗೊಂದು ಎಮ್ಮೆ ಕೊಡಿ, ನಾನು ಹುಟ್ಟಿಲ್ಲವೇನು ಈ ಮನೆಯಲ್ಲಿ" ಎಂದು ಮನೆಯ ಮಗಳು ಯಾವುದೋ ಕಂಡು ಕಾಣದ ಕಾಲದಲ್ಲಿ ಜಾನಪದ ಗೀತೆಯಾಗಿ ಹಾಡಿಕೊಂಡ ಆಸ್ತಿಯ ಹಕ್ಕಿಗೆ ಯಾವ ಪಶ್ಚಿಮದ ಚಿಂತನೆ ಪ್ರೇರಣೆಯಾಗಿದೆ ?

ಸಂಸ್ಕೃತಿಯ ಸಂರಚನೆಯೇ ಪುರುಷಾಧಿಕಾರದ ಎಳೆಗಳ ಹಾಸು ಹೊಕ್ಕಿನ ಹೆಣಿಕವಾಗಿರುವಾಗ, ಮತ್ತು ಮಹಿಳೆಯರು ಸಾಂಸ್ಕೃತಿಕ ನೆಲೆಯಿಂದ ತಮ್ಮತನದ ಹುಡುಕಾಟ ಪ್ರಾರಂಭಿಸುವಾಗ ಅದು ಸಂಸ್ಕೃತಿಯ ಟೀಕೆಯಾಗಿ ಮಾತ್ರ ಬರಲು ಸಾಧ್ಯ. ಸ್ವಲ್ಪ ಎಚ್ಚರ ತಪ್ಪಿದರೂ ದಾಸ್ಯಕ್ಕೊಳಪಡಿಸುವ ಪಿತೃಪ್ರಧಾನತೆಯ ದಯಾಪರ ಹುನ್ನಾರಗಳನ್ನೇ 'ನಮ್ಮ ಸಂಸ್ಕೃತಿ' ಎಂದು ಕಲ್ಪಿಸಿಕೊಂಡು ಬಿಡುವ ಅಪಾಯವಿದೆ.

ಇನ್ನೂ ಸೂಕ್ಷ್ಮ ನೆಲೆಗಳಿಂದ ವ್ಯಾಪಕವಾದ ಸಾಂಸ್ಕೃತಿಕ ವಿಮರ್ಶೆ ಆಗಬೇಕಿದೆ ನಿಜ. ಆದರೆ ಪ್ರತಿಭಟನೆಗಳೇ ಸಾಂಸ್ಕೃತಿಕ ನೆಲೆಯವಲ್ಲ ಎಂಬ ಮಾತನ್ನು ಒಪ್ಪಲು ಸಾಧ್ಯವೇ ಇಲ್ಲ. ಇಂತಹ ಟೀಕಾಕಾರರು ಇನ್ನೂ ಜವಾಬ್ದಾರಿಯುತರಾಗಲಿ ಎಂದು ಆಶಿಸೋಣ.

# ಆಧುನಿಕ ಕನ್ನಡ ಕಾವ್ಯದಲ್ಲಿ ಮಹಿಳೆ

● ವಿಜಯಾ ದಬ್ಬೆ

ಸಾಹಿತ್ಯದಲ್ಲಿನ ಮಹಿಳೆಯ ಪರಿಕಲ್ಪನೆಯ ಸ್ವರೂಪ ಮತ್ತು ಅವಳ ಬದುಕಿನ ಗ್ರಹಿಕೆ ಮತ್ತು ಮೌಲ್ಯ ಮಾಪನವು ಸಾಹಿತ್ಯದ ಹಿಂದಿನ ಸಾಂಸ್ಕೃತಿಕ ಪರಿಸರ, ಕರ್ತೃವಿನ ವ್ಯಕ್ತಿತ್ವದ ಸ್ವರೂಪಾದಿಗಳನ್ನು ಅವಲಂಬಿಸುತ್ತವೆ. ಕನ್ನಡ ನಾಡಿನಲ್ಲಿ ಸಂಸ್ಕೃತಿಯ ಪ್ರಧಾನವಾಹಿನಿಯೆಂದು ಗುರುತಿಸಲ್ಪಟ್ಟ ಸಂಸ್ಕೃತಿಯು ಬಹುತೇಕ ಪಿತೃಪ್ರಧಾನ ವ್ಯವಸ್ಥೆಯ ಉತ್ಪನ್ನವೂ ಪುರುಷಕೇಂದ್ರಿತ ಚಿಂತನೆಯನ್ನಾಧರಿಸಿದ್ದೂ ಆಗಿದ್ದರೂ ಅದಕ್ಕಿಂತ ಭಿನ್ನವಾದ ಉಪಸಂಸ್ಕೃತಿಗಳ ಅಂಶಗಳನ್ನೂ ತನ್ನಲ್ಲಿ ಅಂತರ್ಗತಗೊಳಿಸಿಕೊಂಡಿದೆ. ಸಾಹಿತ್ಯ ಕೇವಲ ಸಂಸ್ಕೃತಿಯ ವಾಹಕ ಅಥವಾ ಪ್ರತಿಬಿಂಬವಾಗಿರಧೆ ವಿಭಿನ್ನ ಕಾಲಘಟ್ಟಗಳಲ್ಲಿ ಆ ಸಂಸ್ಕೃತಿ ಪಡೆದ ಸ್ಪಂದನ, ಸ್ವೀಕಾರ, ವಿರೋಧಗಳನ್ನು ಒಳಗೊಂಡಿರುತ್ತದೆ. ಹೀಗಾಗಿ ಕನ್ನಡ ಕಾವ್ಯ ಪರಂಪರೆಯಲ್ಲಿ ಕಂಡುಬರುವ ಸ್ತ್ರೀ ಸಂಬಂಧಿಯಾದ ಗ್ರಹಿಕೆಗಳು ಒಂದೇ ಬಗೆಯವಲ್ಲ. ವಿಭಿನ್ನ ಚಾರಿತ್ರಿಕ ಹಂತ, ಪರಿಸರಗಳಲ್ಲಿ ಗ್ರಹಿಕೆಗಳು ಬದಲಾಗಿರುವುದಷ್ಟೇ ಅಲ್ಲದೇ ಒಂದೇ ಹಂತದಲ್ಲಿ ಕೂಡ ವೈವಿಧ್ಯಗಳಿವೆ. ಆಧುನಿಕ ಪೂರ್ವದ ಕನ್ನಡ ಕಾವ್ಯದಲ್ಲಿ ಆಗ ಚಾಲ್ತಿಯಲ್ಲಿದ್ದ ಸ್ತ್ರೀ ಸಂಬಂಧಿ ಮೌಲ್ಯಗಳ ಸ್ಥಿರೀಕರಣದ ಮೇಲೆ ಒತ್ತಿದೆ. ಈ ಮೌಲ್ಯಗಳು ನ್ಯಾಯಯುತವಾಗಿಲ್ಲವೆಂಬುದನ್ನು ಅನೇಕರು ಕಂಡಿದ್ದಾರೆ. ಅಂಥ ಮೌಲ್ಯಗಳು ಸ್ತ್ರೀಯರ ಬದುಕನ್ನು ದಾರುಣವಾಗಿಸುವುದನ್ನು ಕಂಡು ನೊಂದಿದ್ದಾರೆ. ಆದರೂ ಆ ಮೌಲಿಕ ಚೌಕಟ್ಟನ್ನು ಬದಲಾಯಿಸಬೇಕು, ಬದಲಾಯಿಸಲು ಸಾಧ್ಯ ವೆಂಬುದನ್ನು ರಚನಾತ್ಮಕವಾಗಿ ಕಾಣಿಸಲಾಗಿಲ್ಲ. ಆಧುನಿಕ ಕನ್ನಡ ಕಾವ್ಯದ ಪರಿಸ್ಥಿತಿ ಇದಕ್ಕಿಂತ ಭಿನ್ನವಾದ್ದು. ಈಗ ಚಾಲ್ತಿಯಲ್ಲಿರುವ ಸ್ತ್ರೀ ಸಂಬಂಧಿ ಮೌಲ್ಯಗಳ ಬೆಂಬಲಿಗರು ಇದ್ದಾರಾದರೂ ಈ ಮೌಲ್ಯಗಳ ಪ್ರಶ್ನಿಸುವಿಕೆ, ಸುಧಾರಣಾಪರತೆ, ಅಪಮೌಲ್ಯೀಕರಣ ಹಾಗೂ ಬದಲಾವಣೆಗಳ ಸ್ಪಷ್ಟ ಪ್ರತಿಪಾದಕರೂ ಇದ್ದಾರೆ. ಸಮಾಜದಲ್ಲಂತೋ ಅಂತೆ ಸಾಹಿತ್ಯದಲ್ಲೂ ಉದಾರವಾದಿ ಸ್ತ್ರೀವಾದ ಪ್ರಾಧಾನ್ಯವಾಗಿದ್ದರೂ ಸಮಾಜವಾದಿ ಹಾಗೂ ತೀವ್ರಗಾಮಿ ಸ್ತ್ರೀವಾದದ ಅಲೆಯೂ ಬರುತ್ತಿದೆ. ಆಧುನಿಕ ಕಾವ್ಯದಲ್ಲಿ ಬದಲಾದ ಸ್ತ್ರೀ ಸಂಬಂಧಿ ಮೌಲ್ಯಗಳ ಸ್ವರೂಪವನ್ನು ಗಮನಿಸುವುದು ಈ ಟಿಪ್ಪಣಿಯ ಮುಖ್ಯ ಉದ್ದೇಶವಾದರೂ ಈ ಬದಲಾವಣೆಯ ಹಿನ್ನೆಲೆಯಲ್ಲಿ ಇರುವ ಆಧುನಿಕ ಪೂರ್ವದ ಕನ್ನಡ ಕಾವ್ಯದ ಈ ದಿಕ್ಕಿನ ವಿಚಾರಗಳನ್ನೂ ಸಂಕ್ಷಿಪ್ತವಾಗಿ ಇಲ್ಲಿ ಗಮನಿಸಿದೆ.

ಆಧುನಿಕ ಪೂರ್ವದ ಕನ್ನಡ ಕಾವ್ಯದಲ್ಲಿ ಹಲವು ಮಹಿಳಾ ಮಾದರಿಗಳಿವೆ. ಧಾರ್ಮಿಕ ಶ್ರದ್ಧೆ, ಆಧ್ಯಾತ್ಮಿಕ ಆಸಕ್ತಿ, ಪಾತಿವ್ರತ್ಯದಲ್ಲಿ ನಿಷ್ಠೆ, ಪತ್ನಿ ಮತ್ತು ಮಾತೆಯ ಪಾತ್ರಗಳಲ್ಲಿನ ಅವಳ ಶ್ರೇಷ್ಠತೆ - ಇಂಥ ಮೌಲ್ಯಗಳಲ್ಲಿ ಸ್ತ್ರೀಯರ ಬದುಕನ್ನು ಅಳೆಯುವ ಪ್ರಯತ್ನ ನಮ್ಮ ಪ್ರಾಚೀನ ಕಾವ್ಯ ಮತ್ತು ಶಾಸನಗಳಲ್ಲಿದೆ. ಧಾರ್ಮಿಕ ಶ್ರದ್ಧೆಯನ್ನು ತೋರಿದ ಮಹಿಳೆಯರನ್ನು 'ಅತ್ತಿಮಬ್ಬೆಯ ಮಾದರಿ'ಗಳೆನ್ನಬಹುದು. ಇಂಥವರು ಮಾಡಿದ ದಾನ ಧರ್ಮಗಳನ್ನು ಪ್ರಶಂಸಿಸಲಾಗಿದೆ. ಅತ್ತಿಮಬ್ಬೆ, ಸಾವಿಯಬ್ಬೆ, ಬಮ್ಮಲದೇವಿ ಮೊದಲಾದವರನ್ನು ಕುರಿತು ಬಂದ ಕಾವ್ಯ, ಶಾಸನಗಳು ಈ ದಿಕ್ಕಿನವು. 'ಗಾಂಧಾರಿ ಮಾದರಿ'ಗಳು ತಮ್ಮ ಪಾತಿವ್ರತ್ಯದಿಂದ ಹೊಗಳಿಕೆಗೆ ಒಳಗಾಗಿವೆ. ಸೀತೆ, ಅನಸೂಯೆ, ಸುನಂದೆ ಮೊದಲಾದವರ ಕಥೆಗಳು ಪಾತಿವ್ರತ್ಯದ ಮಹಿಮೆಯನ್ನು ಸಾರುವಂಥವು. ಪತಿವ್ರತೆಯರ ಮಹಿಮೆಯನ್ನು ಹಲವು ಕೃತಿಗಳು ಸಾಂದರ್ಭಿಕವಾಗಿ ಹೇಳಿವೆ. ಆಧ್ಯಾತ್ಮಿಕ ಸಾಧನೆಗಾಗಿ ಹಲವು ಮಹಿಳೆಯರು ಸಾಹಿತ್ಯದಲ್ಲಿ ನೆನೆಯಲ್ಪಟ್ಟಿದ್ದಾರೆ, ಅಂಥವರು ಸಾಹಿತ್ಯ ಕೃತಿಗಳ ಕೇಂದ್ರವಾಗಿದ್ದಾರೆ. ಹನ್ನೆರಡನೆಯ ಶತಮಾನದ ವೀರಶೈವ ಚಳವಳಿ ಆಧ್ಯಾತ್ಮಿಕ ಸಾಧನೆಯ ಬಾಗಿಲುಗಳನ್ನು ಮಹಿಳೆಯರಿಗೆ ತೆರೆದದ್ದರ ಫಲವಾಗಿ 'ಅಕ್ಕನ ಮಾದರಿ' ಮಹಿಳಾ ವ್ಯಕ್ತಿತ್ವದ ಆಯಾಮವನ್ನು ಸಾಂಸ್ಕೃತಿಕ ಇತಿಹಾಸದಲ್ಲಂತೋ ಅಂತೆ ಸಾಹಿತ್ಯಕ ಇತಿಹಾಸದಲ್ಲೂ ಹಿಗ್ಗಿಸಿತು. ಈ ಹಂತದಿಂದ ಮುಂದಿನ ನೆಲೆಯಲ್ಲಿ ಬಂದ ಹರಿಹರನ 'ಗಿರಿಜಾಕಲ್ಯಾಣ' ಮೊದಲ ಬಾರಿಗೆ ಸ್ತ್ರೀ ಕೇಂದ್ರಿತ ವಸ್ತುವನ್ನು ಆರಿಸಿಕೊಂಡಿತು. ಹೆಣ್ಣು ಮಕ್ಕಳನ್ನು ಬಯಸಿದ, ಅದಕ್ಕಾಗಿ ತಪಸ್ಸು ಮಾಡಿದ ಒಬ್ಬ ಅಪವಾದದ ಮಹಿಳೆಯಾಗಿ ಗಿರಿಜೆಯ ತಾಯಿ ಮೇನೆಯನ್ನು ಇಲ್ಲಿ ಕಾಣುತ್ತೇವೆ.

ಹರನಿಗೆ ವಧುವಾಗುವವಳು ಎಂಬ ಕಾರಣದಿಂದ ಗಿರಿಜೆಯ ಮಹತ್ತ್ವ ಹೆಚ್ಚಿದೆ ಎಂಬುದು ನಿಜವಾದರೂ ಅದಕ್ಕಾಗಿ ಸಾಧನೆ ಮಾಡುವವಳು ಗಿರಿಜೆ ಎಂಬುದೂ ಗಮನಿಸಬೇಕಾದ್ದು. ಗಂಡನ ಆದರ್ಶಗಳಿಗಾಗಿ ತಮ್ಮನ್ನು ಅರ್ಪಿಸಿಕೊಂಡ 'ಚಂದ್ರಮತಿ ಮಾದರಿ'ಗಳು, ಆದರ್ಶ ಮಾತೆಯರಾಗಿ ಬೆಳಗಿದ ಮಾದರಿಗಳು, ತಮ್ಮ ಗಂಡಂದಿರ ಮೂಲಕ ತಮ್ಮ ಗುರಿಯನ್ನು ತಲುಪುವ 'ದ್ರೌಪದಿ ಮಾದರಿಗಳು' – ಇಂಥ ಹಲವು ಹತ್ತು ಸ್ತ್ರೀ ಬದುಕಿನ ಚಿತ್ರಗಳು ದೊರೆಯುತ್ತವೆ. ಹೆಣ್ಣೊಂದು ಭೋಗ್ಯವಸ್ತು ಎಂಬ ಧೋರಣೆಯು ಪ್ರಧಾನವಾಗಿರುವ ಆಧುನಿಕ ಪೂರ್ವ ಸಾಹಿತ್ಯದಲ್ಲಿ ಅಂಗೀಕೃತ ಮೌಲ್ಯಗಳ ವಲಯ ದಲ್ಲಿ ಬೆಳಗಿದ ಮಾತೆಯರು, ಆದರ್ಶ ಪತ್ನಿಯರು, ಆಧ್ಯಾತ್ಮಿಕ ಸಾಧಕಿಯರು, ಧಾರ್ಮಿಕ ಶ್ರದ್ಧಾವಂತರು ಎತ್ತಿ ಹಿಡಿಯಲ್ಪಟ್ಟಿದ್ದಾರೆ. ಮಹಿಳಾ ಜೀವನದ ಗ್ರಹಿಕೆ ಯಲ್ಲಿ ಈ ಮೇಲಿನ ಅಂಶಗಳೇ ಪ್ರಧಾನವಾಗಿದ್ದರೂ ಅಂದಿನ ಕೌಟುಂಬಿಕ, ಸಾಮಾಜಿಕ ರಚನೆಯಲ್ಲಿ ಮಹಿಳೆ ಯರು ಎದುರಿಸುತ್ತಿದ್ದ ಪರಿಸ್ಥಿತಿಯ ವಾಸ್ತವ ಚಿತ್ರ ವನ್ನು ಅಲ್ಲಲ್ಲಿ ಕಾಣುತ್ತೇವೆ. ಅಂಥ ಎರಡು ಉದಾಹರಣೆ ಗಳನ್ನು ಇಲ್ಲಿ ಗಮನಿಸಬಹುದು (1) ಪ್ರಾಚೀನ ಕರ್ನಾಟಕದಲ್ಲಿನ ಮಹಿಳೆಯರ ಸ್ಥಿತಿಯ ಒಂದು ಮುಖ ವನ್ನು ವಡ್ಡಾರಾಧನೆ ಎಂಬ ಗ್ರಂಥದಲ್ಲಿನ 'ಭದ್ರಬಾಹು ಭಟಾರಕರ ಕಥೆ'ಯಲ್ಲಿ ಕಾಣಬಹುದು. ಈ ಕಥೆಯಲ್ಲಿ ಬರುವ ಜಯಘಂಟೆ ಎಂಬ ಗೃಹಿಣಿಯು ತನ್ನ ಮನೆಯಲ್ಲಿ ಕೆಲಸ ಮಾಡುತ್ತಿದ್ದ ನಂದಿಮಿತ್ರನಿಗೆ ಹೊಟ್ಟೆ ತುಂಬ ಊಟಕ್ಕೆ ಹಾಕಬಾರದೆಂಬ ಗಂಡನ ಆಜ್ಞೆಯನ್ನು ಮೀರಿ ಒಂದು ಹಬ್ಬದ ದಿನ ಕರುಣೆಯಿಂದ ಹೊಟ್ಟೆ ತುಂಬ ಊಟ ಹಾಕಿದಳು. ಅವಳು ಹೀಗೆ ಮಾಡಿದ್ದರಿಂದ ಸಿಟ್ಟು ಗೊಂಡ ಅವಳ ಗಂಡ ಅವಳನ್ನು 'ಸಾಯೆ ಬಡಿದು' ಮನೆ ಯಿಂದ ಹೊರಗಟ್ಟಿದ. ಕುಟುಂಬದೊಳಗೆ ಗಂಡಸಿನ ಆಧಿಪತ್ಯಕ್ಕೊಳಗಾಗಿ ನಲುಗುತ್ತಿದ್ದ ಹೆಂಗಸಿನ ಜೀವನ ವನ್ನು ಈ ಕಥೆ ಸೂಚಿಸುತ್ತದೆ. ಆದರೆ ಹೆಂಗಸನ್ನು ಹೀಗೆ ಕ್ರೂರವಾಗಿ ನಡೆಸಿಕೊಂಡ ಗಂಡಸನ್ನು ಕಥೆ ಮೆಚ್ಚಿಯೂ ಇಲ್ಲ. ಹಾಗೆ ಕ್ರೂರಿಯಾದ ಜಯಘಂಟೆಯ ಗಂಡನನ್ನು ನಂದಿಮಿತ್ರ 'ಪಂಚ ಮಹಾಪಾತಕನ್' ಎಂದಿದ್ದಾನೆ. ನಂದಿಮಿತ್ರನ ಮೂಲಕ ಕಥೆಗಾರ ಹೆಂಗಸಿನ ಮೇಲಿನ ಕ್ರೌರ್ಯಕ್ಕೆ ತನ್ನ ವಿರೋಧವನ್ನು ಸೂಚಿಸಿದ್ದಾನೆ ಎಂದು ತೋರುತ್ತದೆ. ಆದರೆ ಹೆಂಗಸಿನ ದುಃಸ್ಥಿತಿಯನ್ನು ಲೌಕಿಕ ಪ್ರಯತ್ನಗಳಿಂದ ನಿವಾರಿಸಬಹುದೆನ್ನುವುದಾಗಲೀ ಲೌಕಿಕ ನೆಲೆಯಿಂದಲೇ ಈ ಸಮಸ್ಯೆ ಉದ್ಭವಿಸಿತೆಂಬುದನ್ನಾಗಲೀ ವಡ್ಡಾರಾಧನೆಯ ವಿಚಾರಧಾರೆ ಒಪ್ಪುವುದಿಲ್ಲ. ಕಡುಪಾಪ ದಿಂದಾಗಿ ಜೀವ ಹೆಣ್ಣುಜನ್ಮವನ್ನು ತಳೆಯುತ್ತದೆಂದು ನಂಬುವ ವಡ್ಡಾರಾಧನೆ ಧರ್ಮಪರತೆಯಲ್ಲೇ ಇದಕ್ಕೆ ಉತ್ತರವನ್ನು ಕಾಣುತ್ತದೆ. (2) ಮಹಿಳೆಯರ ಅಭ್ಯುದ್ಧಿಗೆ ಸಾಮಾಜಿಕವಾಗಿ ಇದ್ದ ತಡೆಯನ್ನು ಶ್ರುತಕೀರ್ತಿಯ 'ವಿಜಯಕುಮಾರಿ ಚರಿತೆ' (1567-68) ಕಾಣಿಸುತ್ತದೆ. ಈ ಕೃತಿಯಲ್ಲಿ ಪಾಯಣಸೆಟ್ಟಿ ಎಂಬಾತ ತನ್ನ ಮಗಳಿಗೆ ಶಿಕ್ಷಣ ಕೊಡಲಾರಂಭಿಸಿದ. ಆ ಹುಡುಗಿ ಪ್ರತಿಭಾವಂತೆ, ಶ್ರದ್ಧಾವಂತೆ, 'ಶ್ರೀದೇವಿಯಂತೆ ಶಾಸ್ತ್ರಂಗಳ ಮನವೇಲ್ದು ಸಾಧಿಸುತಿರ್ದಳ್'. ಆದರೆ ಶಿಕ್ಷಣ ಕೊಡುತ್ತಿದ್ದ ಮುನಿಯು ಹುಡುಗಿಯು ಕೊಂಚ ವಯಸ್ಕಳಾದಾಗ ನಿರಾಕರಿಸಿದ. ಮಾವಿನ ಹೂವು ಮಂಜಿಗೆ ಕೆಡುವಂತೆ ಹೆಂಗಸಿನ ನೋಟವೆಂಬ ವಿಷ ಯತಿಜನರನ್ನು ಕೆಡಿಸುತ್ತದೆ. ಆದ್ದರಿಂದ ನೀನಿನ್ನು ವಿದ್ಯಾಭ್ಯಾಸಕ್ಕಾಗಿ ಇಲ್ಲಿ ಬರಬೇಡ ಎಂದು ಹುಡುಗಿಗೆ ಹೇಳಿದ. ಆ ಹುಡುಗಿ, ವಿಜಯ ಕುಮಾರಿ ಕಣ್ಣೀರಿಡುತ್ತ ಬೇಡಿದಳು, ಆದರೆ ಲೋಕಾಪ ವಾದದ ಭೀತಿಯಿಂದ ಹುಡುಗಿಯ ಬೇಡಿಕೆಯನ್ನು ಮುನಿ ತಳ್ಳಿಹಾಕಿದ. ಆಗ ಹುಡುಗಿ ನೊಂದು ತನ್ನ 'ಪುಣ್ಯಬಂಧ ಸಡಿಲವಾಯ್ತು' ಎಂದುಕೊಂಡು ಮನೆಗೆ ಬಂದಳು. ಪಾಯಣಸೆಟ್ಟಿಯೇನೋ ಅಪರೂಪದ ತಂದೆಯಾಗಿ ಮಗಳಿಗೆ ಓದಲು ಮಂಟಪ ಕಟ್ಟಿಸಿದ, ಅಸಾಧಾರಣ ಜ್ಞಾನದ ಹಂಬಲಿದ್ದ ವಿಜಯಕುಮಾರಿ 'ಸ್ವಾಧ್ಯಾಯ' ಮಾಡಿದಳು. ಆದರೆ ಮಹಿಳೆಯ ಶಿಕ್ಷಣಕ್ಕಿದ್ದ ತಡೆ, ಸಾಮಾಜಿಕ ಪರಿಸ್ಥಿತಿಯಿಂದಾಗಿ ಮಹಿಳೆ ತನ್ನ ಹುಟ್ಟನ್ನೇ ಅಳಿದುಕೊಂಡು ನೈಚ್ಯಾನುಸಂಧಾನ ಬೆಳೆಸಿಕೊಳ್ಳುವಂಥ ಪರಿಸ್ಥಿತಿ ಹಾಗೂ ಸಾರ್ವಜನಿಕ ಸಾಮೂಹಿಕ ಬದುಕಿನಿಂದ, ಕಲಿಕೆಯಿಂದ ಸ್ತ್ರೀಯರು ವಂಚಿತರಾದ್ದನ್ನು ಈ ಕಥೆ ತೋರಿಸುತ್ತದೆ. ಶಿಷ್ಟ ಸಾಹಿತ್ಯ ವಲಯದ ಈ ಕೆಲವು ನಿದರ್ಶನಗಳಂತೆ ಜನಪದ ಸಾಹಿತ್ಯದಲ್ಲೂ ಮಹಿಳೆಯ ಬದುಕಿನ ಸಮಸ್ಯೆ, ದಾರುಣತೆಯ ವಸ್ತುಸ್ಥಿತಿಗೆ ಕನ್ನಡಿ ಹಿಡಿದ ಅನೇಕ ಕೃತಿಗಳಿವೆ.

ಭಾರತದ ಸಾಂಸ್ಕೃತಿಕ ಇತಿಹಾಸವು 19ನೆಯ ಶತ ಮಾನದ ಉತ್ತರಾರ್ಧ ಮತ್ತು 20ನೆಯ ಶತಮಾನದಲ್ಲಿ ಕಂಡಷ್ಟು ಪ್ರಭಾವಗಳನ್ನು, ಒತ್ತಡಗಳನ್ನು, ತಿರುವು ಗಳನ್ನು, ಕಂಪನಗಳನ್ನು ಪ್ರಾಯಶಃ ಹಿಂದೆಂದೂ

ಕಂಡಿರಲಿಲ್ಲ. ಪಾಶ್ಚಿಮಾತ್ಯ ಶಿಕ್ಷಣ, ವಿಚಾರಗಳ ಪ್ರಭಾವ ಹೊಸ ಪ್ರಜಾತಾಂತ್ರಿಕ ವ್ಯವಸ್ಥೆಯ ಹಂಬಲ, ವೈಯಕ್ತಿಕತೆ, ವಿಚಾರಶೀಲತೆಗೆ ಬಿದ್ದ ಒತ್ತು ಇವೆಲ್ಲದರ ನಡುವೆ ಅರಳಿದ ತನ್ನ ಚಾರಿತ್ರಿಕ ನೆಲೆ ಕುರಿತ ಜ್ಞಾನ, ವಿಶ್ವಾಸ ಮತ್ತು ಆತ್ಮಾವಲೋಕನವು ಹೊಸ ಅರಿವನ್ನೂ ಗೊಂದಲವನ್ನೂ ಹಂಬಲವನ್ನೂ ಹುಟ್ಟಿಸಿದವು. ಈ ಹಿನ್ನೆಲೆಯಲ್ಲಿ ಸ್ತ್ರೀಯರ ಪ್ರಶ್ನೆ, ಸಮಸ್ಯೆಗಳತ್ತ ವಿಶೇಷ ಗಮನ ಹರಿಯಿತು. ಸತಿ, ವಿಧವಾ ಸಮಸ್ಯೆ, ಬಾಲ್ಯ ಹಾಗೂ ವಿಷಮ ವಿವಾಹಗಳೇ ಮೊದಲಾದ ಕಣ್ಣು ಚುಚ್ಚುವ ಸಮಸ್ಯೆಗಳು ಉಪೇಕ್ಷೆ ಮಾಡಲಾಗದಷ್ಟು ತೀಕ್ಷ್ಣವಾಗಿದ್ದವು. ಭಾರತೀಯ ಸ್ತ್ರೀ ಮಾದರಿಯನ್ನು ಆತ್ಯಂತಿಕವಾಗಿ ಬದಲಾಯಿಸಲು ಒಪ್ಪದವರೂ ಕೂಡ ಸುಧಾರಣೆಯನ್ನು ಪ್ರತಿಪಾದಿಸಿದರು, ಸ್ತ್ರೀಯರ ಸ್ಥಿತಿಗೆ ಸಹಾನುಭೂತಿ ತೋರಿದರು. ಆಧುನಿಕ ಕನ್ನಡ ಕಾವ್ಯದಲ್ಲಿ ಹಾಗೆ ಗಮನಿಸಿದ ಸ್ತ್ರೀ ಸಮಸ್ಯೆಗಳು, ಬಿದ್ದ ಒತ್ತುಗಳು ಮೊದಲಾದವನ್ನು ಇಲ್ಲಿ ಸಂಕ್ಷಿಪ್ತವಾಗಿ ಗಮನಿಸಿದೆ.

**ವೈಧವ್ಯ**

ವಿಧವೆಯರ ಬದುಕಿನ ಸ್ವರೂಪವನ್ನು, ವೈಧವ್ಯದ ನೀತಿ ನಡಾವಳಿಯ ಅನುಷ್ಠಾನದಲ್ಲಿ ಮೇಲು ಜಾತಿಗಳಲ್ಲಿ ವಿಶೇಷವಾಗಿ ಸಾಗಿಬಂದ ನಡವಳಿಕೆಯಲ್ಲಿ ಪಿತೃಪ್ರಧಾನ್ಯತೆಯ ಕ್ರೌರ್ಯ ಹೆಪ್ಪುಗಟ್ಟಿ ನಿಂತಿದೆ ಎನ್ನಬಹುದು. ವಿಧವೆಯರ ಸಮಸ್ಯೆಗೆ ಅವರವರ ಕರ್ಮವೇ ಕಾರಣ ಎಂದು ಸನಾತನ ನಂಬಿಕೆ ತನ್ನ ಕೈತೊಳೆದುಕೊಂಡಿತು. ಆಧುನಿಕ ಕನ್ನಡ ಕಾವ್ಯ ಈ ನಂಬಿಕೆಯನ್ನು ಪ್ರಶ್ನಿಸಿತು, ವಿರೋಧಿಸಿತು, ನಿರಾಕರಿಸಿತು. ಮಾನವೀಯ ದೃಷ್ಟಿಕೋನದಿಂದ ವಿಧವೆಯರ ಸಮಸ್ಯೆಗಳನ್ನು ಚಿತ್ರಿಸಿತು. 1935ರ 'ನೆಳಲು ಬೆಳಕು' ಕವನ ಸಂಕಲನದ 'ಅನಾಥೆ' ಎಂಬ ಕವನದಲ್ಲಿ ವಿಸೀ ಅವರು ವೈಧವ್ಯದ ನೋವಿನ ಜೊತೆಗೆ ಆ ಸ್ಥಿತಿಯನ್ನು ಬದಲಿಸಲಾಗದ ಅಂದಿನ ವೈಯಕ್ತಿಕ ದುರಂತವನ್ನು ಸೂಚಿಸಿದ್ದಾರೆ. ಹಬ್ಬದ ಸಡಗರದಲ್ಲಿ ಏಕಾಂಗಿಯಾದ- ಅನಾಥೆಯಾದ ವಿಧವೆಯ ನೋವಿನಿಂದ ಕವನ ಪ್ರಾರಂಭವಾಗಿ ಇದರ ಕಾರಣಕ್ಕೆ ಇಳಿಯುತ್ತಾ 'ನೀ ಗೈದ ಕರ್ಮವೋ ಜಗದ ಕಣ್ಕುರುಡುಗಳೋ । ಯಾರು ಹೇಳುವರಿದನು ಅಳಿದಿರುವರು' ಎನ್ನುತ್ತದೆ. ಕರ್ಮ ಕಾರಣವೆಂಬುದನ್ನು ಅನುಮಾನಿಸಿ ಸಮಾಜದ ಕುರುಡು ನಂಬಿಕೆಯತ್ತ ಬೆರಳು ತೋರುತ್ತದೆ. ಹಿಂದಿನ ಪದ್ಧತಿಗಳ ಬಗ್ಗೆ ನಾವು ಬೆಳೆಸಿಕೊಂಡ ಕುರುಡು ನಿಷ್ಠೆ ನಮ್ಮ ಮಾನವೀಯ ನೋಟವನ್ನು ಹೇಗೆ ಹೊಸಗಿ ಹಾಕುತ್ತದೆಂಬುದನ್ನು ಕವಿ ಮರೆಯುವುದಿಲ್ಲ.'ನೀನಿಡುವ ಕಣ್ಣೀರು ಜನತೆಯನ್ನು ಕರಗಿಸದು । ಕಲ್ಲೆದೆಯುಕಠಿನಗಳು ಮುರಿಯದಿಹವು'. ಆದರೆ ಇಡೀ ಸಂದರ್ಭದಲ್ಲಿ ಒಂದು ದಿನಕ್ಕಾದರೂ ಆಕೆಯ ದುಃಖವನ್ನು ಕಳೆಯಲಾಗದ ತನ್ನ ಸ್ಥಿತಿಯ ಸ್ವವಿಮರ್ಶೆಯೂ ಇಲ್ಲಿದೆ :

> ಲೋಕವಾಡುವುದೆಂದು ಹೆದರಿ ಹಿಮ್ಮೆಟ್ಟುವೆವು
> ಕಗ್ಗಲ್ಲ ಬಾಳಿದನು ಹೊರೆಯುತಿಹೆವು
> ಯಾರೇನ ಗೈಯಲಿಕು ಮುಂದೆ ಸಾರದೆ ಇಹೆವು
> ನಾಳೆ ನಾಡಿನ ಕರುಣೆ ತೆರೆವವರೆಗು

ನಾಡಿನ ಕರುಣೆ ತೆರೆಯುವುದನ್ನು ಆತಂಕದಿಂದ ಕಾಯುತ್ತಾ ಕವನ ನಿಲ್ಲುತ್ತದೆ. ಆದರೆ ನಾಡೆಂಬುದು ಏನು ? ಕರುಣೆ ತಾನಾಗಿ ತೆರೆವುದು ಯಾವಾಗ ? ಮಹಾರಾಷ್ಟ್ರ, ಬಂಗಾಲಗಳಲ್ಲಿ ಆ ಕಾಲಕ್ಕೆ ನಡೆಯುತ್ತಿದ್ದ ಸುಧಾರಣೆಯ ಯತ್ನಗಳು ಏನೂ ಪ್ರಭಾವ ಬೀರಲಿಲ್ಲವೆ ?—ಎಂಬ ಪ್ರಶ್ನೆಗಳಲ್ಲಿ ಈ ಕವನ ನಮ್ಮನ್ನು ಬಿಡುತ್ತದೆ.

ವೈಧವ್ಯದ ದಾರುಣತೆಯನ್ನು ಮನಮುಟ್ಟುವಂತೆ ಚಿತ್ರಿಸುವ ಕವನ ಬೇಂದ್ರೆಯವರ ಪ್ರಸಿದ್ಧವಾದ 'ಪುಟ್ಟ ವಿಧವೆ', ಬಾಲ್ಯವಿವಾಹ, ವೈಧವ್ಯದ ಸಮಸ್ಯೆಗಳೊಂದಿಗೆ ವಿಧವೆಯರ ಹತಾಶ ಸ್ಥಿತಿಯನ್ನು ಧರ್ಮದ ಹೆಸರಿನಲ್ಲಿ ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವ ಸಮಯ ಸಾಧಕತೆಯನ್ನೂ ಮುಂದಿಟ್ಟಿದೆ. ಬಾಲರ ವಿವಾಹದೊಂದಿಗೆ ಪ್ರಾರಂಭವಾಗುವ ಕವನ ತನ್ನ ವಿಮರ್ಶೆಯನ್ನು ಸೂಕ್ಷ್ಮವಾಗಿ ನಿರೂಪಣೆಯಲ್ಲಿ ಸೇರಿಸಿದೆ: 'ಧರ್ಮದಾ ಹೆಸರಿನಲ್ಲಿ ಆವರ ಕೈಕೂಡಿಸಲು ಇವರಿಗೆನಿಸಿತು ಹರ್ಷಹಬ್ಬದಷ್ಟು'. ಆದರೆ ಚೊಚ್ಚಲು ಕೂಸನ್ನು ಪಡೆದ ಹುಡುಗಿ ವಿಧವೆಯಾದಳು: 'ಮಗನು ಬಂದಿರೆ ಇಹಕೆ, ತಂದೆ ಏರಿದ ಪರಕೆ । ಕ್ಷೀರಸಾಗರವಾಯ್ತು ಉಪ್ಪು ನೀರು'. ತಂದೆ ಹಿಡಿದ ಹಾದಿಯನ್ನು ಕೂಸು ಹಿಡಿದಿತು : 'ತಾಯಿಗುಳಿದಿತೇನು ? ಮೈಗೋರಿಯಲಿ ಮಡಗಿ ಜೀವ, ಜೀವನ ವಾಯ್ತು ಜೇನುಹುಳ ಉಳಿದಂತೆ ಕಳೆದ ಜೇನು'. ಶಾಸ್ತ್ರ ಧರ್ಮದ ಹೆಸರಿನಲ್ಲಿ ಮಾನವೀಯತೆ ಕಣ್ಮರೆಯಾಯಿತು. ಶತಮಾನಗಳ ಮೇಲುಜಾತಿಯ ವಿಧವೆಯ ಬದುಕಿನ ನೋವನ್ನು ಕವಿ ಎರಡೇ ಸಾಲಿನಲ್ಲಿ ಹಿಡಿದಿ

ದ್ದಾರೆ. ಹಿಟ್ಟು ಅವಲಕ್ಕಿಗಳ ಮೂಲಕ್ಕೆ ಹುಟ್ಟಿದ್ದಳೋ ಹೂಬತ್ತಿ ಹೊಸೆಯಲಿಕೆ ಮೈ ಕಳೆದಳೋ'. ಕುರುಡ ಧರ್ಮಕ್ಕೆ ಸ್ಮಾರಕ ನಿಂತಂತೆ ಅವಳು ನಿಂತಳು. ಧರ್ಮ ಶ್ರದ್ಧೆಯ ಸೋಗಿನಲ್ಲಿ ಇಂಥವರನ್ನು ಬಲಿಯಾಗಿಸುವ ಸ್ಥಿತಿ ಕೊನೆಯ ಸಾಲುಗಳಲ್ಲಿದೆ: 'ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊ ಮೈ ಜಾರಕೃಷ್ಣನ ಕಥೆಗೆ ಕೋಡು ಮೂಡಿತ್ತು'

**ವೈವಾಹಿಕ ಚೌಕಟ್ಟು**

ವಿವಾಹ ಮತ್ತು ಕುಟುಂಬ ಸ್ತ್ರೀಪುರುಷರಿಬ್ಬರ ಜೀವನದಲ್ಲೂ ಮುಖ್ಯವಾದ್ದು ಮತ್ತು ಸಮಾಜದ ಇರುವಿಕೆ ಹಾಗೂ ಮುಂದುವರಿಕೆಗೆ ಅಗತ್ಯವಾಗಿರುವ ಸಾಮಾಜಿಕ ಸಂಸ್ಥೆಗಳಾಗಿವೆ. ಹೀಗಿದ್ದರೂ ಹೆಂಗಸಿನ ಪಾಲಿಗೆ ವಿವಾಹ ಮತ್ತು ಕುಟುಂಬಗಳು ತೀರ ನಿರ್ಣಯಾತ್ಮಕವಾದ ಕೇಂದ್ರಗಳಾಗಿವೆ. ಅವಳ ಬದುಕಿನ ಗುರಿಯೇ ವಿವಾಹವೆಂದೂ ಅವಳು ತನ್ನನ್ನು ತಾನು ಸಂಪೂರ್ಣವಾಗಿ ಕುಟುಂಬಕ್ಕೆ ಒಪ್ಪಿಸಿಕೊಂಡು ಅದರ ಪಾಲನೆ ಮಾಡಬೇಕೆಂದೂ ಅವಳ ಜೀವನದ ಸಾರ್ಥಕತೆಯನ್ನು ಆ ಚೌಕಟ್ಟಿನೊಳಗೇ ಕಂಡುಕೊಳ್ಳಬೇಕೆಂದೂ ರೂಢಿಗೊಂಡಿರುವುದರಿಂದ ಹೆಂಗಸಿನ ಜೀವನದಲ್ಲಿ ಅವಳಿಗೆ ದೊರೆಯುವ ವೈವಾಹಿಕ ಚೌಕಟ್ಟು ತುಂಬ ಮಹತ್ತ್ವದ ಪಾತ್ರ ವಹಿಸಿದೆ/ವಹಿಸುತ್ತಿದೆ.

ವೈವಾಹಿಕ, ಸಾಂಸಾರಿಕ ಚೌಕಟ್ಟಿನೊಳಗಿನ ಹೆಣ್ಣಿನ ಬದುಕನ್ನು ನೋಡಿರುವ ಕನ್ನಡ ಕಾವ್ಯದ ದೃಷ್ಟಿಕೋನಗಳು ವಿಭಿನ್ನವಾಗಿವೆ. ಒಂದು ಬಗೆಯ ಕಾವ್ಯ ಆ ಚೌಕಟ್ಟಿನೊಳಗಿನ ಗೃಹಿಣಿಯ ಪಾತ್ರವನ್ನು ಎತ್ತಿಹಿಡಿದು ಪ್ರಶಂಸಿಸಿದೆ. ಮತ್ತೊಂದು ಬಗೆಯ ಕಾವ್ಯ ಸಂಸಾರದೊಳಗಿನ ಹೆಣ್ಣಿನ ನೋವು, ಇಕ್ಕಟ್ಟುಗಳನ್ನು ಗುರುತಿಸುತ್ತದೆ. ಬಿಕ್ಕಟ್ಟಿಗೆ ಸಿಕ್ಕಿದ ಹೆಣ್ಣಿನ ನೆಲೆಯಿಂದ ಮಹಿಳೆಯ ವೈವಾಹಿಕ ಬದುಕನ್ನು ನೋಡುವ ಪ್ರಯತ್ನ ಮಾಡಿದೆ. ಕುಟುಂಬದ ಅಗತ್ಯವನ್ನು ಪ್ರಶ್ನೆ ಮಾಡುವ ಮತ್ತು ಆ ಸಂಸ್ಥೆಯನ್ನು ನಿರಾಕರಿಸುವ ಪ್ರಯತ್ನಗಳೂ ನಡೆಯುತ್ತಿವೆ.

ಗೃಹಿಣಿಯ ಮಹತ್ವವನ್ನು 1957ರಲ್ಲಿ ಬಂದ ಇಕ್ಷುಗಂಗೋತ್ರಿಯ 'ಮನೆಮನೆಯ ತಪಸ್ವಿನಿಗೆ' ಎಂಬ ಕುವೆಂಪು ಅವರ ಕವನ ಹೇಳುತ್ತದೆ.

ಹೇ ದಿವ್ಯ ಸಾಮಾನ್ಯೆ
ಹೇ ಭವ್ಯ ದೇವಮಾನ್ಯೆ
ಚಿರಂತನ ಅಕೀರ್ತಿ ಕನ್ಯೆ
ಅನ್ನಪೂರ್ಣೆ ಅಹಂ ಶೂನ್ಯೆ
ನಮೋ ನಿನಗೆ ನಿತ್ಯ ಧನ್ಯೆ

–ಎಂದು ಗೃಹಿಣಿಗೆ ತನ್ನ ಗೌರವವನ್ನು ಸೂಚಿಸುವ ಕವನವು ಸಾರ್ವಜನಿಕ ಜೀವನದಲ್ಲಿ, ರಾಜಕೀಯದಲ್ಲಿ ಸಕ್ರಿಯವಾಗಿದ್ದು ಕೀರ್ತಿ ಹೊಂದಿದ ಸರೋಜಿನಿ, ಝಾನ್ಸಿರಾಣಿ, ವಿಜಯಲಕ್ಷ್ಮಿ ಪಂಡಿತೆ–ಇಂಥವರೊಂದಿಗೆ ಗೃಹಿಣಿಯನ್ನು ಹೋಲಿಸಿ 'ನಿನ್ನ ಭೂಮದಿದಿರಿನಲ್ಲಿ ರಾಜಕೀಯದಲ್ಪತೆ' ಎಂದು ಉಳಿದ ಕ್ಷೇತ್ರಗಳಲ್ಲಿನ ಮಹಿಳೆಯ ಸಾಧನೆ ಗೃಹಿಣಿ ಪದದ ಸಾಧನೆಯ ಮುಂದೆ ಅಲ್ಪವಾದ್ದು ಎಂದು ಹೇಳುತ್ತ ಇದುವರೆಗಿನ ಗೃಹಿಣಿತ್ವ ಮಹತ್ವದ ರೂಢಿಯನ್ನು ಬೆಂಬಲಿಸುತ್ತದೆ. ರಾಜಕೀಯ, ಖ್ಯಾತಿಗಳ ಅಮಲು ಗಂಡಸಿನದು ಆ ಹಂಬಲ ಗೃಹಿಣಿಗೆ ಹತ್ತದಿರಲಿ ಎನ್ನುವುದು ಅವರ ಅಪೇಕ್ಷೆ. ಹಾಗೆ ಮಾಡಲು ಹೊರಟರೆ ಸಂಸಾರ ಕುಸಿದೀತೆಂಬ ಭೀತಿ ಮುಖ್ಯವಾಗಿದೆ :

ಹೊಸಲಾಚೆಗೆ ನೀನೋತರೆ
ಹೊಸಲೀಚೆಗೆ ಬೆಳಕಿಲ್ಲ
ಹೆಸರಾಸೆಗೆ ನೀ ಸೋತರೆ
ಉಸಿರಾಸೆಯೆ ನಮಗಿಲ್ಲ !

ಈ 'ಮನುಕುಲ ಕಲ್ಯಾಣಿ'ಯು 'ಒಪ್ಪಾಗಿ ಒಲವಾಗಿ'ದ್ದುಕೊಂಡು ನಮ್ಮನ್ನು ನಿಜಮತದಲ್ಲೂ ಋಜುಪಥದಲ್ಲೂ ನಡೆಸಲೆಂಬ ಕವಿಯ ಆಶಯ ಈ ಕವನದಲ್ಲಿ ಸ್ಪಷ್ಟವಾಗಿದೆ. ಹೆಂಗಸಿನ ದೃಷ್ಟಿಕೋನದಿಂದ ಕುಟುಂಬ ಏನಾಗಬಹುದು ಎಂಬುದರತ್ತ ಅಥವಾ ಕುಟುಂಬದಾಚೆಗೂ ಹೆಣ್ಣಿಗೊಂದು ವ್ಯಕ್ತಿತ್ವ ಇರುವುದರತ್ತ ಕವಿ ಗಮನಹರಿಸಿಲ್ಲ. 'ಗೃಹಿಣಿ' ಎಂಬ ಶೀರ್ಷಿಕೆಯಲ್ಲೇ ಬೇಂದ್ರೆಯವರದು ಒಂದು ಕವನವಿದೆ. ಆದರೆ ಇಲ್ಲಿ ಗೃಹಿಣಿಗೆ ಯಾವ ಉಪದೇಶಗಳನ್ನೂ ಮಾದರಿಗಳನ್ನೂ ಕೊಟ್ಟಿಲ್ಲ ಅಥವಾ ಗೃಹಿಣಿ ಪಟ್ಟದಿಂದ ಅವಳು ತಪ್ಪಿಸಿಕೊಂಡರೆ ಎಂಬ ಭೀತಿಯೂ ಇಲ್ಲ. ಬದಲಿಗೆ ಈಗಿನ ವ್ಯವಸ್ಥೆಯಲ್ಲಿ ಅವಳ ಕೊಡುಗೆಯ ಮಹತ್ವವನ್ನು ಹಿಡಿದಿಡಲಾಗಿದೆ. ಗೃಹಿಣಿಯಾಗಿ, ತಾಯಿಯಾಗಿ ಅವಳ ಪ್ರಾಮುಖ್ಯತೆಯನ್ನು ಗುರುತಿಸುವುದರ ಜೊತೆಗೆ ಅವಳ

ಸಾಹಚರ್ಯದ ರಚನಾತ್ಮಕ ಮುಖವನ್ನು ಗುರುತಿಸುವುದು ಈ ಕವನದ ವಿಶೇಷ. ನಮ್ಮ ಸಮಾಜೀಕರಣದ ಪ್ರಕ್ರಿಯೆಯಲ್ಲಿ ಗಂಡಿನಲ್ಲಿರುವ ಹೆಣ್ಣುತನವನ್ನೂ ಹೆಣ್ಣಿನಲ್ಲಿರುವ ಗಂಡುತನವನ್ನೂ ಅದುಮಿಡಲಾಗಿದೆಯಷ್ಟೆ. ವೈವಾಹಿಕ ಜೀವನದ ಗಂಡು-ಹೆಣ್ಣಿನ ಸಾಹಚರ್ಯ ಈ ಕೊರತೆಯನ್ನು ಕೆಲಮಟ್ಟಿಗೆ ತುಂಬುತ್ತದೆ, ತಿದ್ದುತ್ತದೆ. ಬೇಂದ್ರೆಯವರು ಕವನದ ಮೊದಲಿಗೇ ಹೇಳುವಂತೆ ಪೌರುಷವಷ್ಟೆ ಪ್ರಧಾನವಾದ ಬದುಕಿಗೆ ಮೃದು, ಮಾಧುರ್ಯ, ಕೋಮಲತಗಳನ್ನು ಅವಳು ತುಂಬುತ್ತಾಳೆ. ಒಟ್ಟು ಕುಟುಂಬದ ಬದುಕಿಗೇ ಅವಳು ಜೀವನಾಡಿಯಾಗುವ ಬಗೆಯನ್ನು ಕವನದ ಕೊನೆಯ ಸಾಲುಗಳು ಹೀಗೆ ಹಿಡಿದಿದುತ್ತವೆ :

ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ
ಮಂಗಲವೆ ಬಾರೆಂದು ಕರೆಯುವಾಕೆ
ಬಾಳ ಸುಳಿಯಲಿ ಬೆಳೆಯ ತೋರುವಾಕೆ
ದಿನದಿನವು ನವಜಯವ ಕೋರುವಾಕೆ.

ಕೌಟುಂಬಿಕ ಜೀವನಕ್ಕೆ ಹೆಣ್ಣು ತರುವ ಸೊಗಸು, ಸೌಂದರ್ಯದ ಹಲವು ಮುಖಗಳನ್ನು ಕೆ.ಎಸ್. ನರಸಿಂಹಸ್ವಾಮಿಯವರ ಕವನಗಳು ಚಿತ್ರಿಸುತ್ತವೆ. ವಿವಿಧ ವಯೋಮಾನ, ಸ್ಥಿತಿಗಳಲ್ಲಿನ ಮಹಿಳೆಯ ಕೌಟುಂಬಿಕ ಜೀವನದ ವಿವರಗಳೇ ಅವರ ಕಾವ್ಯದಲ್ಲಿವೆ.

ಸಮಜವಾಬ್ದಾರಿಯ, ದಮನಕಾರಿಯಾಗಿಲ್ಲದ, ಆದರ್ಶ ಸ್ಥಿತಿಯ ಕೌಟುಂಬಿಕ ವ್ಯವಸ್ಥೆ ಹೆಣ್ಣಿಗೆ ಅಪೇಕ್ಷಣೀಯವಾದೀತು. ಆದರೆ ಈಗಿನ ಕೌಟುಂಬಿಕ ರಚನೆಯು ಹಲವು ರೀತಿಗಳಲ್ಲಿ ಮಹಿಳೆಯ ಪಾಲಿಗೆ ದಮನಕಾರಿಯಾಗಿದೆ. ಈ ವಾಸ್ತವತೆಯನ್ನು ಹಿಡಿಯುವ ಪ್ರಯತ್ನವು ಕೆಲವರ ಕಾವ್ಯದಲ್ಲಿ ಕಾಣುತ್ತದೆ. 1933ರಲ್ಲಿ ಪ್ರಕಟವಾದ 'ಕವಿಯ ಸೋಲು' ಎಂಬ ಸಂಕಲನದ 'ಒಂದು ಕಾಗದ' ಎಂಬ ಎಂ. ಆರ್. ಶ್ರೀ ಯವರ ಕವನ ಈ ದಿಕ್ಕಿನದು.

ನೀವು ನನಗೆ ಗಂಡನಲ್ಲ
ನಾನು ನಿಮಗೆ ಹೆಂಡಿರಿಲ್ಲ
ಎಂದು ತಿಳಿವುದು

–ಎಂಬ ಹೆಂಡತಿಯ ನಿಲವಿನೊಂದಿಗೇ ಕವನದ ಪತ್ರ ಆರಂಭವಾಗುತ್ತದೆ. ಕೌಟುಂಬಿಕ ಜೀವನದಲ್ಲಿ ರೋಸಿ ಹೋದ ಹೆಣ್ಣಿನ ಬದುಕು ಈ ಮಾತುಗಳ ಹಿಂದಿದೆ. ರೂಢಿಗೆ ವಿರುದ್ಧವಾದ ಇಂಥದೊಂದು ತೀರ್ಮಾನಕ್ಕೆ ಬರಲು ಬಲವಾದ ಕಾರಣಗಳಿದ್ದರೂ ಮತ್ತೆಮತ್ತೆ ಇಂಥ ಅಭಿಪ್ರಾಯವನ್ನು ಹಿಂದಕ್ಕೆ ತೆಗೆದು ಕೊಳ್ಳಲು ಒತ್ತಾಯ ಮಾಡಲಾಗುತ್ತದೆ. 'ಬ್ರಹ್ಮಗಂಟು' ಇದೆಂದು ಹೇಳುವ ಗಂಡನಿಗೆ ಆಕೆ ಹೇಳುತ್ತಾಳೆ :

ಬ್ರಹ್ಮ ಗಿಮ್ಮ ಹಾಕಲಿಲ್ಲ
ಅಪ್ಪ ತಂದು ನನಗೆ ನಿಮಗೆ
ಗಂಟು ಹಾಕಿದ.

ಕುಟುಂಬದ ಪಾವಿತ್ರ್ಯತೆ, ಧಾರ್ಮಿಕತೆಯ ಬಗೆಗೆ ಬೇಕಾದಷ್ಟು ಉಪನ್ಯಾಸ ಕೊಡಬಹುದು. ಆದರೆ ಅಂಥವರಿಗೆ ಕವನದ ನಾಯಕಿ ಹೇಳುವ ಮಾರ್ಮಿಕ ಉತ್ತರ ಹೀಗಿದೆ :

ಶಾಸ್ತ್ರಗೀಸ್ತ್ರ ತಿಳಿಯೆ ನಾನು
ಬರೆದ ಜನರು ಹೆಂಡಿರಾಗಿ
ಸೇವೆ ಮಾಡಲಿ

ಇದಕ್ಕೆ ವಿಚ್ಛೇದನ ಉತ್ತರವೆ ? ಇರಬಹುದು ಸಮಾಜ ಅದಕ್ಕೆ ಸಿದ್ಧವಾಗಿದ್ದಾಗ ವಿಚ್ಛೇದನ ಪಡೆದ ಹೆಣ್ಣು ಸಮಾಜ ಬಾಹಿರಳೆಂಬಂತೆ ಕಾಣಲ್ಪಟ್ಟಾಗ ವಿಚ್ಛೇದನದಿಂದ ಮಹಿಳೆಗೆ ಯಾವ ಹೊಸ ಬಾಳ್ವೆ ತೆರೆದುಕೊಳ್ಳುತ್ತದೆ ? ವಿಚ್ಛೇದನದ ತೀರ್ಪು ಕೊಡಬಲ್ಲ ಜಡ್ಜಿಗೆ ಆಕೆಯ ಸವಾಲು :

ತನ್ನ ಮಗಳ ನಿಮಗೆ ಕೊಟ್ಟು
ತನ್ನ ಮಗನ ಎನಗೆ ಕೊಟ್ಟು
ಮದುವೆ ಮಾಡಲಿ

ಕುಟುಂಬ ಕ್ಷನಗೆ ಅಸಹನೀಯವಾದಾಗ ಹೊರಗೆ ಬರ ಬಯಸಿದ ನಾಯಕಿ ತನ್ನ ಜೀವನಕ್ಕೆ ಕೊಟ್ಟ ತಿರುವು ಮಾತ್ರ ವಿಧಾಯಕವಾದ್ದಲ್ಲ. ಜನ್ಮ ನೀಗುವ ನಿರ್ಧಾರವನ್ನು ಆಕೆ ಮಾಡಿ ಸೊಸೆಯಲ್ಲಿ ಹೀಗೆನ್ನುತ್ತಾಳೆ :

ಶಾಸ್ತ್ರಧರ್ಮ ತಣ್ಣಗಾಗಿ
ಬಯ್ವ ಜನರು ಉರಿದು ಹೋಗಿ
ಲೋಕವಡಗಲಿ

ಉದ್ವಿಗ್ನಗೊಂಡ ಮನಃಸ್ಥಿತಿಯಲ್ಲಿ ಹತಾಶವಾದ ಮನಸ್ಸಿನ ವಿನಾಶಕಾರೀ ತಿರುವು ಇಲ್ಲಿದೆ. 'ಗಂಡ' ಪದ್ಯದಲ್ಲಿ ಜಾನಕಮ್ಮನವರು ಹೆಣ್ಣಿನ ಕೌಟುಂಬಿಕ ಬದುಕನ್ನು ಸರ್ಪದ ನೆಳಲಿಗೆ ಹೋದ ಕಪ್ಪೆಯ ಸ್ಥಿತಿಗೂ ಬಂಡಿಗೆ ಕತ್ತುಕೊಟ್ಟ ಬಸವನ ಸ್ಥಿತಿಗೂ ಹೋಲಿಸುತ್ತಾರೆ. ಎಂಥ

ವನು ಸಂಗಾತಿಯಾಗಿ ದೊರಕುತ್ತಾನೆ ಎಂಬುದರ ಮೇಲೆ ಹೆಣ್ಣಿನ ಸುಖ, ದುಃಖ ನಿಲ್ಲುವಂತಾಗಿದೆ. ಇದೇ ಕವನದಲ್ಲಿ ಜಾನಕಮ್ಮ ಹೇಳುವಂತೆ 'ಹಸನಾದ ಪುರುಷನು ದೊರೆತರೆ ಆನಂದ । ಇಲ್ಲದಿದ್ದರೆ ಸದಾಸ್ವಾಮಿ ಗೋವಿಂದ.

ವೈವಾಹಿಕ ಚೌಕಟ್ಟಿನೊಳಕ್ಕೆ ಗಂಡಹೆಂಡಿರಿಬ್ಬರೂ ಒಟ್ಟಾಗಿ ಬಂದರೂ ಅದಕ್ಕೆ ಬದ್ಧವಾಗಿರಬೇಕಾದ್ದು ಹೆಣ್ಣು ಮಾತ್ರ ಎಂಬ ಅಲಿಖಿತ ನಂಬಿಕೆ ಚಾಲ್ತಿಯಲ್ಲಿರುವಂತಿದೆ. ಅಂತೆಯೇ ಹೆಣ್ಣಿನ ಮನಸ್ಸು ನಂಬಿರುವಂತಿದೆ. ವಿವಾಹಕ್ಕೆ ವಿಧೇಯಳಾಗಿ ಉಳಿದು ಸವತಿಯರೊಂದಿಗೆ ಗಂಡನ ಸರಸವನ್ನು ನೋಡುತ್ತಾ ಒಳಗೊಳಗೇ ಬೇಯುತ್ತ, ಅಸಹಾಯಕವಾಗಿರಬೇಕಾದ ಸ್ಥಿತಿ ಹಲವು ಮಹಿಳೆಯರದು. 'ಸಹ-ಗಮನ' ಎಂಬ ಕವನದಲ್ಲಿ ಮಾಲತಿ ಪಟ್ಟಣಶೆಟ್ಟಿ ಈ ಸ್ಥಿತಿಗೆ ಹೀಗೆ ದನಿ ನೀಡಿದ್ದಾರೆ :

ಎಷ್ಟೆಷ್ಟು ಸಲ ನಗುತ
ಮುತ್ತನಿಕ್ಕಿದ ಪತಿ
ಒಳಗೆ ಹಾವಾಗಿ ಕನಸು
ಕಣ್ಣ ಕಚ್ಚಿದ್ದು ?
ಎಷ್ಟೆಷ್ಟು ಸಲ ನನ್ನ ಮನೆ
ಹೊಕ್ಕ ಸವತಿಯರು ಹಾಡೆ
ಹಗಲಲ್ಲಿ ಕೊಳ್ಳಿ ಹೊಡೆದದ್ದು ?

ವೈವಾಹಿಕ ಜೀವನವನ್ನು ಕಟ್ಟುವ ಹೆಣ್ಣು ಹಲವು ಬಾರಿ ತನ್ನ ಸ್ವಂತಿಕೆ, ಪ್ರತಿಭೆಗಳನ್ನು ಕಳೆದುಕೊಳ್ಳಬೇಕಾದ ಸಂದರ್ಭವಿದೆ. ತನ್ನನ್ನು ತಾನು ಆ ಜೀವನದ ಯಶಸ್ಸಿಗೆ ಸಮರ್ಪಿಸಿಕೊಳ್ಳುತ್ತಾ ತಾನೇ ಕಳೆದುಹೋಗಿ ಶೂನ್ಯ ಭಾವವನ್ನು ಎದುರಿಸುವ ಮಹಿಳೆಯ ಚಿತ್ರ ಸುಕನ್ಯಾ ಮಾರುತಿಯವರ 'ಬಿದ್ದವಳು' ಕವನದಲ್ಲಿದೆ. ಹೆಂಡತಿಯಾಗಿ ಕಲಿತ ವಿದ್ಯೆಯನ್ನೆಲ್ಲ ಅಡಿಗೆ ಮನೆಯ ಜಂತಿ ಎಣಿಸುವುದಕ್ಕೆ ಬಳಸಬೇಕಾಗಿ ಬಂದ ಅವಳ ಜೀವನ ಸ್ಥಿತಿ ಹೀಗಿದೆ: 'ಅವ ಬಿತ್ತಿದ್ದನ್ನು ನಾ ಬೆಳೆಯುತ್ತ । ಕಾಲ ಕಳೆಯುತ್ತಿದ್ದೇನೆ । ನನ್ನೊಳಗೆ ಎಲ್ಲೋ । ಕಳೆದಿರುವ 'ನನ್ನ' । ಹುಡುಕುತ್ತಿದ್ದೇನೆ.

### ತಾಯ್ತನ

ತಾಯ್ತನವನ್ನು ಹೆಣ್ತನದೊಂದಿಗೆ ಸಮೀಕರಿಸುವಷ್ಟರ ಮಟ್ಟಿಗೆ ತಾಯ್ತನವನ್ನು ಹೆಣ್ಣಿನ ಜೀವನದ ಅವಿಭಾಜ್ಯ ಅಂಗವೆಂದು ತಿಳಿಯಲಾಯಿತು. ತಾಯ್ತನದ ವಾತ್ಸಲ್ಯ, ನಿಷ್ಕಲ್ಮಷ ಪ್ರೇಮ, ತ್ಯಾಗ, ಕಾಳಜಿಯೇ ಮೊದಲಾದವುಗಳನ್ನು ಎತ್ತಿ ಹಿಡಿಯಲಾಯಿತು. ಕೆಟ್ಟ ಮಗ ಇರಬಹುದಾದರೂ ಕೆಟ್ಟ ತಾಯಿ ಇರಲಾರಳು ಎಂಬ ಮಾತು ತಾಯ್ತನದಲ್ಲಿಟ್ಟ ನಂಬಿಕೆಯನ್ನೇ ಸೂಚಿಸುತ್ತದೆ. ಭೂಮಿ, ಭಾಷೆ, ನದಿಗಳನ್ನೆಲ್ಲ ತಾಯಿಯೆಂದೇ ಕಲ್ಪಿಸಿಕೊಳ್ಳಲಾಗುತ್ತದೆ. ಅಂತೆಯೇ ಭೂಮಿತಾಯಿ, ಮಾತೃಭಾಷೆ, ಮಾತೃಭೂಮಿ ಮೊದಲಾದ ಪರಿಕಲ್ಪನೆಗಳು ಹೀಗೆ ಬಂದವು. ತಾಯ್ತನದ ಪ್ರೀತಿ, ತ್ಯಾಗಗಳನ್ನು ಏಮುಖವಾಗಿ ಚಿತ್ರಿಸುವವರೂ ಇದ್ದಾರೆ, ಇಡಿಯಾಗಿ ವಾಸ್ತವವನ್ನು ಹಿಡಿಯುವವರೂ ಇದ್ದಾರೆ. ಇದರ ಒಂದೆರಡು ನಿದರ್ಶನಗಳನ್ನು ಕೆಳಗೆ ಗಮನಿಸಿದೆ :

ತನ್ನ ಮಕ್ಕಳೇ, ಮಕ್ಕಳ ಸುಖವೇ ತನ್ನ ಜೀವನದ ಗುರಿ ಎಂಬ ತಾಯ ಬದುಕಿನ ಬಯಕೆಯನ್ನು ವಿಸೀಯವರು 'ತಾಯಬಯಕೆ' ಎಂಬ ಕವನದಲ್ಲಿ ಸಾಂದ್ರವಾಗಿ ಹಿಡಿದಿದ್ದಾರೆ :

ನನ್ನ ಕಣ್ಣಂಗಳದಿ ಓಡಾಡುತಿರು ಸೊಗವೆ
ನನ್ನ ಬಾಳ್ ಹಣ್ಣಟ್ಟುದೆಂದು ಬಗೆವೆ
ನನ್ನ ಹರಕೆಯು ಭಾಗ್ಯ ಎಂದೆಂದು ಸವಿಯಿಡಲಿ
ನನ್ನ ತಾಯೆದೆ ಬಯಕೆ ಫಲಿಸುತಿರಲಿ

ಲಂಕೇಶರ 'ಅವ್ವ' ಕವನವು ತಾಯಿಯ ವಾಸ್ತವ ಚಿತ್ರವನ್ನು ಸಮಗ್ರವಾಗಿ ಹಿಡಿವ ಒಂದು ಯಶಸ್ವಿ ಪ್ರಯತ್ನ. ಕವನಕ್ಕೆ ಕೊಟ್ಟಿರುವ ಶೀರ್ಷಿಕೆಯಿಂದ ಹಿಡಿದು ಇಡಿಯಾದ ಕವನ ವಸ್ತು ಸ್ಥಿತಿಯನ್ನು ಅತಿಭಾವುಕತೆಯಿಲ್ಲದೆ ರಮ್ಯತೆಯ ಅತಿರೇಕವಿಲ್ಲದೆ ಚಿತ್ರಿಸುತ್ತದೆ. 'ಹೊತ್ತಬುಟ್ಟಿಯ ಇಟ್ಟು ನರಳಿ ಎವೆ ಮುಚ್ಚಿದಳು ತೆರೆಯದಂತೆ'–ಇಂಥ ಕೊನೆಯನ್ನು ಕಂಡ ಅವಳ ಬದುಕಿನಲ್ಲಿ ಹಲವು ಬಣ್ಣಗಳಿವೆ. ಹಲ್ಲ ಜೋಳವನ್ನೆತ್ತಿ ಅಪ್ಪನ ಮೆಚ್ಚಾಗಿ ತೋಳ ಬಂದಿಯ ಗೆದ್ದವಳು. ಕಾಸಿಗೆ, ಕೆಟ್ಟ ಪೈರಿಗೆ, ಸತ್ತ ಕರುವಿಗೆ ಅತ್ತವಳು, ದೇವರ ಪೂಜಿಸದೆ, ಹರಿಕತೆ ಕೇಳದೆ ಬಾಳಿದವಳು ಅವಳು. ಬನದ ಕರಡಿಯ ಹಾಗೆ ಬದುಕಿದ ಅವಳ ಬಾಳಸೂತ್ರ ಹೀಗಿದೆ :

ಬನದ ಕರಡಿಗೆ ನಿಮ್ಮ ಭಗವದ್ಗೀತೆ ಬೇಡ,
ನನ್ನವ್ವ ಬದುಕಿದ್ದು
ಕಾಳು ಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ ;

ಮೇಲೊಂದು ಸೂರು, ಅನ್ನ, ರೊಟ್ಟಿ ಹಚಡಕ್ಕೆ
ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ.

ದುಡಿವ ರೈತ ಮಹಿಳೆಯ ತಾಯ್ತನ ಮತ್ತು ಕೌಟುಂಬಿಕ ಜೀವನವು ಹೀಗೆ ಕಾಣಿಸಿಕೊಂಡಿದ್ದು ಅಪರೂಪ. ಈಚೆಗೆ ಬಂದ ಮತ್ತು ಬರುತ್ತಿರುವ ಸಾಹಿತ್ಯದಲ್ಲಿ ಇಂಥ ವಾಸ್ತವ ಚಿತ್ರಗಳು ಹೆಚ್ಚುತ್ತಿವೆ. 'ಒಲುಮೆ ಹೊನಲ ತೆಡೆಗಳು' ಎಂಬ ಪುಶಿನ ಅವರ ಪದ್ಯದಲ್ಲಿ ತಾಯ ಒಲವಿನ ಸೆಳೆತ ಎಷ್ಟು ಶಕ್ತಿಯುತವಾದದ್ದು ಎಂಬುದರ ಚಿತ್ರಣ ಇದೆ. ಗಂಗಾಧರ ಚಿತ್ತಾಲರ 'ತಾಯಿ' ಕವನವು ತಾಯಿ ಅಕ್ಕರೆ, ತ್ಯಾಗದ ನೆನಪು ಬದುಕಿನುದ್ದಕ್ಕೂ ತಂಪು ಭಾವ ವಾಗಿ, ಅಕ್ಷಯ ಪ್ರೇರಕವಾಗಿ ಬರುವುದನ್ನು ಚಿತ್ರಿಸು ತ್ತದೆ:

ಏಳು ಮಕ್ಕಳ ಹೊರೆದು
ಕೆಮ್ಮಿ ಕೆಮ್ಮಿ ಕೆಮ್ಮಿ ಹಣ್ಣಾದವಳು
ಒಳಗೊಳಗೇ ಒರತಿ ಹತ್ತಿ ಮೈಗೂಡು ಕಳಚಿ
ಮಣ್ಣಾದವಳು.

ಒಂದು ಬಿರುಸಾಡದೆ, ಉರಿಸಾಡದೆ ಮಕ್ಕಳಿಗೆ ಬಡತನದ ಬಿಸಿ ಹತ್ತದಂತೆ ನೋಡಿಕೊಂಡ ಅವಳನ್ನು ಕವನ ಕೃತಜ್ಞತೆಯಿಂದ ನೆನೆದಿದೆ.

'ಮಹಿಳಾ ವರ್ಷದಲ್ಲಿ ಅವ್ವನಿಗೊಂದು ಪತ್ರ' ಎಂಬ ಶಶಿಕಲಾ ವಸ್ತ್ರದ ಅವರ ಕವನ ತಾಯಿಯ ಬದುಕನ್ನು ಚಿತ್ರಿಸುತ್ತಲೇ ತನ್ನ ಸಮಕಾಲೀನ ಬದುಕಿನೊಂದಿಗೆ ಅವಳ ಬದುಕನ್ನು ಹೋಲಿಸಿ ವಿಸ್ಮಯಗೊಳ್ಳುತ್ತದೆ. ಪಿತೃಪ್ರಾಧಾನ್ಯತೆಯ ನೆರಳಲ್ಲಿ ಕುಗ್ಗಿದ, ನಶಿಸಿದ ಆದರೂ ಅದನ್ನು ತೋರಗೊಡದಂತೆ ಬದುಕಿನ ತಾಯಿಯ ಬದುಕನ್ನು ಶಕ್ತವಾಗಿ ಹಿಡಿದಿದೆ.

ಅಡಗೀ ಮನೆನ್ನ ಅಡಕಲ
ಗಡಿಗೀ ಬಿಟ್ಟು
ನೀ ಒಮ್ಮೆರ ನಡುಮನಿಗಿ ಬರಲಿಲ್ಲ

ಎಂಬ ಚಿತ್ರಣ ಅವಳ ಬದುಕಿನ ಅಥವಾ ಅವಳ ಮೇಲೆ ಹೇರಲ್ಪಟ್ಟ ಬದುಕಿನ ಸ್ವರೂಪವನ್ನು ತಿಳಿಸುತ್ತದೆ. ಗಂಡನು ತನ್ನ ವಿಲಾಸಕ್ಕೆ ಕರೆ ಬಂದ ಹೆಂಗಸರೆ ಸೇವೆ ಮಾಡಿಯೂ,ಗಂಡನ ಕುಡಿತದ ಅಮಲಿನ ಹೊಡೆತ ತಿಂದು ನಗು ಮೋರೆ ತೋರಿದ ಅವಳ ಬದುಕನ್ನೂ ಸಾವನ್ನೂ ವಿಸ್ಮಯ ಹಾಗೂ ವಿಷಾದದಿಂದ ಶಶಿಕಲಾ ನೋಡಿದ್ದಾರೆ.

ಒಟ್ಟಿನಲ್ಲಿ ತಾಯಿಯನ್ನೂ ತಾಯ್ತನವನ್ನೂ ಕೃತಜ್ಞತೆ, ಗೌರವದಿಂದ ನೆನೆಯುವ ಹಾಗೂ ಅವಳ ಅಕ್ಕರೆ, ವಾತ್ಸಲ್ಯ, ತ್ಯಾಗಗಳನ್ನು ವಿಶೇಷ ಆದರದಿಂದ ಕಾಣುವ ಚಿತ್ರ ಕನ್ನಡ ಕಾವ್ಯದಲ್ಲಿ ಪ್ರಧಾನವಾಗಿ ಕಾಣು ತ್ತದೆ. ಹಾಗೆಯೇ ತಾಯಿಯಾದವಳ ಒಳಬದುಕಿನ ಬೇಗ, ನೋವುಗಳನ್ನು ಹಿಡಿಯುವ ಕವನಗಳೂ ಇವೆ.

## ಪ್ರೇಮಿಯಾಗಿ ಹೆಣ್ಣು

ಹೆಣ್ಣಿನ - ಪ್ರೇಮ- ಪ್ರಣಯ, ಭಾವಗಳಿಗೆ ದನಿ ಕೊಡುವ ಪ್ರಯತ್ನವನ್ನು ಲೇಖಕ-ಲೇಖಕಿಯರಿಬ್ಬರೂ ಮಾಡಿದ್ದಾರೆ. ಅಧುನಿಕ ಪೂರ್ವದ ಸಾಹಿತ್ಯದಲ್ಲಿ ಹೆಣ್ಣನ್ನು ಕುರಿತ ಗಂಡಿನ ಕಾಮ-ಪ್ರೇಮಕ್ಕೆ ಪ್ರಾಧಾನ್ಯತೆ ಯಿತ್ತು. ಆದರೆ ಅಧುನಿಕ ಕಾವ್ಯದಲ್ಲಿ ಹೆಣ್ಣಿನ ದೃಷ್ಟಿ ಕೋನದಿಂದ ಹೆಣ್ಣು-ಗಂಡಿನ ಸಂಬಂಧವನ್ನು ಕಾಣುವ ಪ್ರಯತ್ನವಿದೆ. ಮೊದಮೊದಲು ಲೇಖಕರು ಕೊಟ್ಟ ಈ ಸಂಬಂಧಿ ಚಿತ್ರಗಳಲ್ಲಿ ರಮ್ಯತೆ ಪ್ರಧಾನವಾಗಿದೆ. ಲೇಖಕಿಯರು ಕಾವ್ಯ ಕೃಷಿಯಲ್ಲಿ ಪಾಲುಗೊಂಡಂತೆಲ್ಲ ಅದರ ವಾಸ್ತವತೆಯ ಹಲವು ಮಗ್ಗುಲುಗಳನ್ನೂ ಸೇರಿಸುತ್ತಿದ್ದಾರೆ.

ಹೆಣ್ಣಿನ ಪ್ರೇಮದನುಭವದ ಸೂಕ್ಷ್ಮಗಳನ್ನು ಪುಶಿನ ಅವರ 'ಪ್ರತೀಕ್ಷೆ' ಕವನವು ಹಿಡಿಯಲು ಯತ್ನಿಸಿದೆ. ಈ ಕವನದ ನಾಯಕಿ ಒಲಿದವನನ್ನು ಕಾಣುವ ಕಾತುರದಲ್ಲಿ ದ್ದಾಳೆ. ಆದರೆ ಕಾತರ ಮತ್ತು ಲಜ್ಜೆಯ ಹೊಯ್ದಾಟ ದಲ್ಲಿ ಅವಳು ಸಿಕ್ಕಿದ್ದಾಳೆ. ತನ್ನ ಪ್ರೇಮಿಯನ್ನು ಕಾಣುವ ಹಂಬಲದಲ್ಲಿರುವ ಅವಳಿಗೆ ಅವರಿಬ್ಬರ ನಡುವಿರುವ ಕೇರಿಯೇ ಕಡಲಾಗಿದೆ. ಹೊರಗಿನ ಶಬ್ದಗಳನ್ನು ಅವಳು ಎಷ್ಟು ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದಾಳೆಂದರೆ ಆ ಶಬ್ದಗಳಿಂದಲೇ ತನ್ನ ಪ್ರಿಯಕರ ಅವನ ಗೆಳೆಯನಿಗೆ ವಿದಾಯ ಹೇಳಿ ತನ್ನ ಮನೆಯತ್ತ ಬರುತ್ತಿರುವುದನ್ನು ಕಾಣದೆಯೂ ತಿಳಿಯುತ್ತಾಳೆ. ಇನ್ನೇನು ಅವನು ಬಂದ ಎನ್ನುವಾಗ ಅವಳಲ್ಲಿ ಕಾಣುವ ಬಯಕೆ, ಕಾಣಲಾಗದ ನಾಚಿಕೆ ಒಂದರೊಡನೊಂದು ಸ್ಪರ್ಧಿಸುತ್ತವೆ:

ಬಹನು ಬರುತಿಹನವ್ವ ಬಂದನು
ಕರಡರೇಗತಿ ಕಾಣೆನೇ
ಬಯಕೆ ಕೊಡೆವಿಡಿದೂಲುಮೆಯುತ್ಸವ
ನನ್ನನರಸಿಯೆ ಬಳಿಗೆ ಬಂದಿರೆ
ಕಾಣದೊಲು ಮರೆನಿಂದನೇ

ಹೀಗೆ ಸ್ತ್ರೀ ಜೀವನದ ಒಂದು ಸೂಕ್ಷ್ಮ ಸಂಕೀರ್ಣ ವಾಸ್ತವವನ್ನು ಕವಿ ಕೊಟ್ಟಿದ್ದಾರೆ. ತಾರೆ, ಗೋಪಿಕೆ ಯರೇ ಮೊದಲಾದ ಪೌರಾಣಿಕ ಪಾತ್ರಗಳ ಮೂಲಕವೂ ಸ್ತ್ರೀಯರ ಈ ದಿಕ್ಕಿನ ಅನುಭವಗಳನ್ನು ಕಾವ್ಯದಲ್ಲಿ ಕೊಡಲು ಅನೇಕರು ಯತ್ನಿಸಿದ್ದಾರೆ. ಕೌಟುಂಬಿಕ ಚೌಕಟ್ಟಿನೊಳಗಿನ ಹೆಣ್ಣಿನ ಪ್ರೇಮಾನುಭವವೂ ಸಾಕಷ್ಟು ವ್ಯಕ್ತವಾಗಿದೆ.

**ಲೈಂಗಿಕತೆ**

ಹೆಣ್ಣಿನ ಲೈಂಗಿಕತೆ, ಲೈಂಗಿಕ ಶಕ್ತಿಯ ಬಗೆಗೆ ಗಂಡಸಿನ ಹೆದರಿಕೆ, ಮೋಹ, ಅದು ಮುಕ್ತವಾಗಲಿಲ್ಲೆಂಬ ಆಗಿದೆ ಯೆಂಬ ವಿಷಾದ, ಮುಕ್ತವಾಗಬೇಕೆಂಬ ಉಪದೇಶ ಹೀಗೆ ಈ ವಿಷಯ ಕುರಿತ ಕಾವ್ಯದಲ್ಲಿನ ಪ್ರತಿಕ್ರಿಯೆ ಹಲವು ಹತ್ತು ರೀತಿಯದು.

ಹೆಣ್ಣಿನ ಲೈಂಗಿಕ ಅಭೀಪ್ಸೆಗೆ ಮೊದಲು ಅಭಿವ್ಯಕ್ತಿ ಕೊಟ್ಟವರು ಶಿಷ್ಟಕಾವ್ಯದಲ್ಲಿ ಪುರುಷರು. ಚಂದ್ರಶೇಖರ ಕಂಬಾರರಂಥ ಕೆಲವು ಕವಿಗಳಲ್ಲಿ ಈ ಬಗೆಯ ಅಭಿವ್ಯಕ್ತಿ ಅವರ ಸಾಹಿತ್ಯದ ಪ್ರಧಾನ ಧ್ವನಿಯೂ ಆಗಿದೆ. ಸ್ತ್ರೀಯ ರಿಂದ ಈ ದಿಕ್ಕಿನ ಕಾವ್ಯ ಬರುತ್ತಿರುವುದು ವಿಶೇಷವಾಗಿ ಕಳೆದ ಎರಡು ದಶಕಗಳಿಂದ.

ಒಂದು ಪೌರಾಣಿಕ ಹಿನ್ನೆಲೆಯಲ್ಲಿ ಹೆಣ್ಣಿನಲ್ಲಿರಬಹು ದಾದ ಲೈಂಗಿಕ ಅಭೀಪ್ಸೆಯ ಒಂದು ಇಣುಕು ನೋಟ ವನ್ನು ಪಾವೆಂ ಆಚಾರ್ಯರ ಒಂದು ಚಿಕ್ಕ ಕವನದಲ್ಲಿ ಕಾಣ ಬಹುದು. ಗೋಪಿಯರ ವಸ್ತ್ರವನ್ನು ಅಪಹರಿಸುವ ಕೃಷ್ಣನ ಲೀಲೆಯ ಸಂದರ್ಭ ಇಲ್ಲಿ ಬೇರೊಂದು ತಿರುವು ಪಡೆದಿದೆ :

ಪ್ರತಿಯೊಬ್ಬ ಗೋಪಿಯೂ
ಏಕಾಂತದಲ್ಲಿ
ಸೀರೆಯನು ಬಿಚ್ಚಿಟ್ಟು
ಇಳಿಯುವಳು ಕಾಳಿಂದಿಯಲ್ಲಿ

ಎಂದು ಪರಿಚಿತವಾದ ಪೌರಾಣಿಕ ಕಥೆಯಿಂದ ಕವನ ಆರಂಭಿಸುತ್ತದೆ. ದಡದತ್ತ ಕಣ್ಣು ಹಾಯಿಸಿ ಬೆಚ್ಚು ತ್ತಾಳೆ: 'ಯಾವ ಗೋಪಾಲ ಯಾವಾಗ ಬರುವನೊ ಎಂದು'. ಇಲ್ಲಿ ಮುಗ್ಧೆಯೊಬ್ಬಳ ಹೆದರಿಕೆಯಂತೆ ಇದು ಕೇಳಿವರೂ ಮುಂದಿನ ಭಾಗ ನಮ್ಮನ್ನು ಮತ್ತೊಂದು ವಾಸ್ತವತೆಯ ಒಳಪದರಕ್ಕೆ ಒಯ್ಯುತ್ತದೆ.

........ಮೇಲೆ ಒಂದು
ಸೀರೆ ಕುಪ್ಪಸವ ಇದ್ದಲ್ಲೆ ಕಂಡು
ಸೂಸುವಳು ತನಗೂ ಕೇಳಿರದಂತೆ
ನಸುನಿರಾಶೆಯ ನಿಟ್ಟುಸಿರನೊಂದು

ತನ್ನ ಲೈಂಗಿಕ ಅಭೀಪ್ಸೆಯನ್ನು ಹೆಣ್ಣು ವ್ಯಕ್ತಪಡಿಸು ವುದನ್ನು ನಮ್ಮ ಸಂಸ್ಕೃತೀಕರಣದ ಪ್ರಕ್ರಿಯೆ ನಿಷೇಧಿಸು ತ್ತದೆ. ಅಂಥ ಬಯಕೆಯೊಂದನ್ನು ಕುರಿತು ಅವಳು ಮಾತನಾಡುವುದೇ ಹೆಣ್ತನಕ್ಕೆ ಸಭ್ಯವಲ್ಲ ಎಂಬ ಸ್ಥಿತಿ ಯಲ್ಲಿ ಬೆಳೆಯುವ ಮಹಿಳೆಯ ವಾಸ್ತವತೆಯ ಒಳಗನ್ನು ಕೊನೆಯ ಸಾಲುಗಳು ಹೇಳುತ್ತವೆ. ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ಪ್ರತಿಪಾದಿಸುವ ಹಾಗೂ ಅಂಥ ಸ್ವಾತಂತ್ರ್ಯವನ್ನು ಪಡೆಯಿರಿ ಎಂದು ಉಪದೇಶಿಸುವ ಕವಿಗಳಿದ್ದಾರೆ. ಇಂಥ ಉಪದೇಶಗಳು ಗಂಡಸರಿಂದ ಬಂದಾಗ ಇದು ಹೆಂಗಸಿಗೆ ಸ್ವಾತಂತ್ರ್ಯ ಕೊಡಿಸುವ ಔದಾರ್ಯವೋ ಸ್ವಂತದ ಬಯಕೆಗಳಿಗೆ ದಾರಿ ಸುಗಮ ಗೊಳಿಸಿಕೊಳ್ಳುವ ಪ್ರಯತ್ನವೋ ಎಂಬ ಸಂಶಯ ಉಳಿಯಬಹುದು. ಅದರಲ್ಲೂ ಹೆಂಗಸರ ಬೇರೆ ಬಗೆಯ ಸ್ವಾತಂತ್ರ್ಯದ ಬಗ್ಗೆ ಮಾತಾಡದಿರುವವರೂ ಇದನ್ನು ಮಾತ್ರ ತೀಕ್ಷ್ಣವಾಗಿ ಪ್ರತಿಪಾದಿಸುವುದು ಸಂಶಯವನ್ನು ಬಲಗೊಳಿಸುತ್ತದೆ. ಲಂಕೇಶರ 'ಜವ್ವನೆಯರಿಗೊಂದು ಕಿವಿಮಾತು' ಕವನದ ಕಿವಿಮಾತು ಹೀಗಿದೆ: ನಿಮ್ಮ ಯೌವನ ಮತ್ತು ಜೀವಕ್ರಿಯೆಯ ತೀವ್ರತೆಯನ್ನು ನಂಬಿ ಎಲ್ಲ ಅಭಯ, ರಕ್ಷಣೆಗಳನ್ನು ಅನುಮಾನದಿಂದ ನೋಡಿ; ಕಸೂತಿಯ ನಡುವೆ ಹಾಡೊಂದು ಉಕ್ಕಿದರೆ ಸುಮ್ಮನೆ ಹಾಡಿಬಿಡಿ,

**ವಂಚಿತೆ**

ಗಂಡಿನ ದ್ರೋಹಕ್ಕೆ ಒಳಗಾದ ಹೆಂಗಸಿನ ಚಿತ್ರವನ್ನು ಅಲ್ಲಲ್ಲಿ ಕಾಣುತ್ತೇವೆ. 'ರಾಮಿಯ ಗಂಡು' ಎಂಬ ಪುತಿನ ಅವರ ಕವನ ಈ ದಿಕ್ಕಿನದು. ಪ್ರೇಮದ ನಾಟಕವಾಡಿ ತಮ್ಮ ಕಾಮತೃಷೆ ತೀರಿದ ಬಳಿಕ ಹೆಣ್ಣನ್ನು ಕೈಬಿಟ್ಟು ಹೋಗುವ ಪುರುಷರು, ಆ ಸಂಬಂಧದಿಂದ ಪಡೆದ ಮಗುವನ್ನು ತಾನೊಬ್ಬಳೇ ಬೆಳಸಬೇಕಾಗಿ ಬರುವ ಮಹಿಳೆಯರು ಸಮಾಜದಲ್ಲಿ ಅಪರೂಪವಲ್ಲ. ಇದು ಪ್ರಾಚೀನ ಸಂಗತಿಯೂ ಹೌದು ಸಮಕಾಲೀನ ಸಂಗತಿಯೂ ಹೌದು. ಮೇಲಿನ ಕವನದ ನಾಯಕಿ

ರಾಮಿ ಮಗುವಿನ ಜವಾಬ್ದಾರಿಯನ್ನು ತಾನೇ ಹೊರುತ್ತಾಳೆ. ಜೀವೋತ್ಪತ್ತಿಯಲ್ಲಿ ಹೆಣ್ಣಿನ ನಿಯಂತ್ರಣ, ಅದಕ್ಕೆ ಬೇಕಾದ ಪ್ರೌಢತೆ, ವೈಜ್ಞಾನಿಕ ಮಾರ್ಗಗಳು ಇಲ್ಲದಾಗ ಜೀವೋತ್ಪತ್ತಿಯಲ್ಲಿ ಸ್ತ್ರೀ ದೇಹರಚನೆಗೆ ಇರುವ ಮಹತ್ವದ ಪಾತ್ರವೇ ಅವಳ ಜೀವನವನ್ನು ಗಂಟಾಗಿಸುತ್ತದೆ. ರಾಮಿಯನ್ನು ವಂಚಿಸಿದವನನ್ನು ಕವನವು ಸ್ಪಷ್ಟವಾಗಿ ಖಂಡಿಸಿದೆ ಮತ್ತು ರಾಮಿಯ ಬಗ್ಗೆ ಕವಿಗೆ ಪೂರ್ಣ ಸಹಾನುಭೂತಿಯಿದೆ. ರಾಮಿಯು ವಂಚಿತಳಾಗಿ ಬಿಕ್ಕಟ್ಟಿಗೆ ಸಿಕ್ಕಿದ ಸಂದರ್ಭವನ್ನು ಕವನ ಹೀಗೆ ಹಿಡಿದಿದೆ :

ಕಾವಿ ಬಿಟ್ಟೋಡಿದನಬಲೆಯ ಸತ್ಪದಿ ।
ಕಾಮದ ಬಿಸಿಯಾರಿ ಹೋಗೆ
ಭೀಮಭವಾರ್ಣವದೊಳಗೀಜಲಿಬ್ಬರೆ ।
ರಾಮಿ-ಮತ್ತಾಕೆಯ ಪಾಪ ।

ರಾಮಿಯ ಮಾತೃಪ್ರೇಮವನ್ನು ಕವನವು ನಿಚ್ಚಳವಾಗಿ ಕಾಣಿಸಿದೆ. ಇಂಥದೇ ವಸ್ತುವಿನ ಮತ್ತೊಂದು ಕವನ ಚಂದ್ರಶೇಖರ ಕಂಬಾರರ 'ಉಂಡುಟ್ಟವರ ನಡುವಿನ ಒಂದು ಹೆಣ್ಣೀ ಆಸ್ಪತ್ರೆಯ ಆವರಣದಲ್ಲಿ ತಂದೆ ಇಲ್ಲದ ಗೊತ್ತಿಲ್ಲದ ಮಗು ಮತ್ತು ಅದರ ತಾಯಿ ಇದ್ದಾರೆ. ಸಮಾಜದ ದೃಷ್ಟಿಯಲ್ಲಿ ಆ ತಾಯಿ ದಾರಿ ತಪ್ಪಿದವಳು. ಅಂತೆಯೇ ಜನರ ಕೊಂಕು ಅವಳಿಗ ಕಾದಿದೆ :

ಗಂಡನೋ ಮಿಂಡನೋ-ಅಂತು ಈ ಪಿಂಡಕ್ಕೆ
ಕಾರಣಕನಾದವನ ಸುಳಿವಿಲ್ಲ.
ದಾಖಲೆಯಲ್ಲಿ ಅವನ ಹೆಸರೂ ಇಲ್ಲ, ಹೋಗಲೆಂದರೆ
ಈಕೆ ಮೇರಿಯೂ ಅಲ್ಲ, ಹುಟ್ಟಿದ್ದು ಏಸುವಲ್ಲ
ಇವಳ ಬಳಿ ಸುಳಿವವಳು ನರ್ಸೊಬ್ಬಳೇ
ಅವಳ ತುಟಿಯಂಚಿಗೂ ಬಿಳಿಯ ನಗೆಯೇ

ಆದರೆ ಈ ಕೊಂಕನ್ನು ಅವಳು ಗಮನಿಸಲಾರದಂತೆ ಅವಳ ತಾಯ ಮಮತೆ ಉಕ್ಕಿದೆ. ಜನರು ಹೇಳುವ ಕಥೆಗಳಿಗೆ ಅವಳ ಕಿವಿ ಕಿವುಡು. ಆ 'ಮೈಮರೆತ ಮಾಯಿ' ಹೀಗಿದ್ದಾಳೆ :

ಹಿಗ್ಗಿ ಹಸಿರಾಗಿ ಉಬ್ಬಿ ಪೊಗ್ಗಾಗಿ ಬಿರಿದು ಹೂವಾಗಿ
ಬಗೆಬಗೆಯ ಧಗೆಯಿಂದ್ಧ ಮಗುವನ್ನು ಕುಲುಕಿ
ಪಲಕುತ್ತ ಲಕಲಕಿಸುತ್ತಾಳೆ.
ಮಲೆಯೊಳಗಿನ ಮಲೆನಾಡಿನಂತೆ.

ಹೀಗೆ ಪುರುಷರಿಂದ ವಂಚಿತರಾದರೂ ಸಮಾಜದ ಕಟು ಟೀಕೆಗೆ ಒಳಗಾದರೂ ಮಕ್ಕಳಲ್ಲಿ ಎಲ್ಲ ಹಿಗ್ಗನ್ನೂ ಸುಖವನ್ನೂ ಕಂಡುಕೊಳ್ಳುವ ತಾಯಂದಿರು ಇವರು. ಶಕುಂತಲೆಯಂಥ ವಂಚಿತೆಯರನ್ನು ಕೇಂದ್ರವಾಗಿಸಿಕೊಂಡು ಅವಳ ನೋವನ್ನೂ ವಂಚಕರನ್ನು ಕುರಿತಾದ ತಮ್ಮ ಸಿಟ್ಟನ್ನೂ ಅನೇಕ ಕವಯಿತ್ರಿಯರು ಸೇರಿದ್ದಾರೆ.

## ಸಂಪ್ರದಾಯ ಮತ್ತು ಹೆಣ್ಣು

ಹೆಂಗಸಿಗೆ ಸಂಬಂಧಿಸಿದಂತೆ ಇರುವ ಹಲವು ಅನಿಷ್ಟ ಸಾಂಪ್ರದಾಯಿಕ ರೂಢಿಗಳು ಆಧುನಿಕ ಕನ್ನಡ ಕಾವ್ಯದಲ್ಲಿ ಖಂಡನೆ, ಪ್ರತಿಭಟನೆಗೆ ಒಳಗಾಗಿವೆ. ಇಂಥ ರೂಢಿಗಳಲ್ಲಿ ಒಂದು ಮುಸ್ಲಿಂ ಸಮುದಾಯದಲ್ಲಿ ಚಾಲ್ತಿಯಲ್ಲಿರುವ ಬುರ್ಖಾ ಪದ್ಧತಿ. ಕೆ.ಎಸ್. ನಿಸಾರ್ ಅಹಮದ್ ಅವರ 'ಅಮ್ಮ ಆಚಾರ ನಾನು' ಕವನದಲ್ಲಿ ಮೆಚ್ಚಿ, ಆರಿಸಿ ಮದುವೆಯಾದ ವಿದ್ಯಾವಂತ ಸತಿ ಸರ್ವಾಲಂಕಾರ ಭೂಷಿತೆಯಾಗಿ ತಿರುಗಾಡಲು ಹೊರಡುವಾಗ ಕೊನೆಯ ಘಳಿಗೆಯಲ್ಲಿ ಅಮ್ಮನ ಬುರ್ಖಾ ತೊಡುತ್ತಾಳೆ. ಸಾಂಪ್ರದಾಯಕತೆಯಕಡೆಗೆ ವಾಲುವ ಹೆಣ್ಣಿನ ಬಗ್ಗೆ ಬೆರಗು, ವಿಷಾದಗಳಿವೆಯೇ ಹೊರತು ಹಾಗೇಕಾಯಿತೆಂಬ ಪ್ರಶ್ನೆಯು ಕಾಡುವುದಿಲ್ಲ. 'ಬುರ್ಖಾ'ಗಳು ಎಂಬ ರಂಜಾನ್ ದರ್ಗಾ ಅವರ ಕವನದಲ್ಲಿ ಈ ಬೆರಗನ್ನು ಮೀರಿದ ಸಂತಾಪವಿದೆ, ಕೋಟಲೆಯ ಅರಿವಿದೆ :

ಕಪ್ಪು ಬುರ್ಖಾಗಳು—ಪ್ರತಿಭಟನೆಯಿಲ್ಲ
ಕೆಂಪು ಬುರ್ಖಾಗಳು—ಕ್ರಾಂತಿಯಿಲ್ಲ
ಹಸಿರು ಬುರ್ಖಾಗಳು—ದಾರಿಸುಗಮವಿಲ್ಲ.

ಬೇಸರವಿಲ್ಲದೆ — ಬೇಸರ ತೋರಿಸದೆ । ನೋವಿನಲ್ಲೂ ನಗುತ್ತ-ಅದಕ್ಕೇ ಹೊಂದಿಕೊಳ್ಳುತ್ತ ಹೋಗುವ ಅವರ ಅಂಜಿಕೆಗಳು, ರಹಸ್ಯಗಳು, ನಿರ್ಬಂಧಗಳನ್ನು ಗುರುತಿಸುವ ಕವನ ಇದಾಗಿದೆ. ಅನೇಕ ಶತಮಾನಗಳಿಂದಲೂ 'ಕ್ಷಯದ ಆಗರವಾಗಿ' ಸಾಗುತ್ತಿರುವ ಬುರ್ಖಾಗಳ ಸ್ಥಿತಿಯನ್ನು ಪ್ರಗತಿ ಬಯಸುವ ಮನಸ್ಸು ಅವಲೋಕಿಸಿದೆ, ಚಿತ್ರಿಸಿದೆ.

## ವಿಭಿನ್ನ ಆರ್ಥಿಕ ನೆಲೆಗಳಲ್ಲಿ ಮಹಿಳೆ

ಪ್ರಗತಿಶೀಲತೆ ಮತ್ತು ಬಂಡಾಯಗಳ ಸಂದರ್ಭದಲ್ಲಿ ಹೆಣ್ಣಿನ ಸಮಸ್ಯೆಯನ್ನು ವಿಶೇಷವಾಗಿ ವರ್ಗದ ಹಿನ್ನೆಲೆ

ಯಲ್ಲಿ ಗಮನಿಸಲಾಯಿತು. ವರ್ಗಶೋಷಣೆಯ ಹಿನ್ನೆಲೆಯಲ್ಲಿ ಲಿಂಗಜಾತಿಶೋಷಣೆಯು ಹೇಗೆ ಮತ್ತಷ್ಟು ಕ್ರೂರವಾಗುತ್ತದೆ ಎಂಬ ವಸ್ತುವಿಗೆ ಅನೇಕರು ತಮ್ಮ ಲಕ್ಷ್ಯ ಕೊಟ್ಟಿದ್ದಾರೆ. ಸಾಮಾಜಿಕ ಉತ್ಪಾದನೆಯಲ್ಲಿನ ಮಹಿಳೆಯ ಹಿಂದೆಗೆತ, ಆರ್ಥಿಕ ಅವಲಂಬನೆ, ಸ್ತ್ರೀ ದುಡಿಮೆಗೆ ಇರುವ ಅಗ್ಗದ ಬೆಲೆ ಅಥವಾ ಬೆಲೆಯೇ ಇಲ್ಲದಿರುವಿಕೆ ಈ ಮುಂತಾದ ಅಂಶಗಳು ಸ್ತ್ರೀ ದಾಸ್ಯದ ಚರಿತ್ರೆಯ ಅತ್ಯಂತ ಮುಖ್ಯವಾದ ಅಂಶಗಳು. ಅಂತೆಯೇ ಸ್ತ್ರೀ ವಿಮೋಚನೆಯ ಒಂದು ಪ್ರಮುಖ ಅಂಶವೆಂದರೆ ಆರ್ಥಿಕ ಸ್ವಾತಂತ್ರ್ಯವಾಗಿದೆ.

ದುರ್ಬಲ ವರ್ಗದ ಒಂದು ಹೆಣ್ಣಿನ ಬದುಕಿನ ನೋವನ್ನು ಎಕ್ಕುಂಡಿಯವರು ತಮ್ಮ 'ಹುಡುಗಿಯ ಕಥೆ' ಎಂಬ ಕವನದಲ್ಲಿ ತಂದಿದ್ದಾರೆ. ಅರಳಬೇಕಾದ ಒಂದು ಜೀವ ದಾರುಣ ಬಡತನ, ಅನಾಥಸ್ಥಿತಿಯಲ್ಲಿ ಸುರುಟಿ ಹೋಗುವುದನ್ನು ಕವಿ ಪರಿಣಾಮಕಾರಿಯಾಗಿ ತಂದಿದ್ದಾರೆ. 'ಬಾ ಅಜ್ಜಿ ಇಲ್ಲಿ ಬಾ ಕಾಫಿ ಹಾಕು ಕಪ್ಪಿಗೆ' ಎಂಬ ಸಾಲುಗಳು ಪದ್ಯದುದ್ದಕ್ಕೂ ಪುನರುಕ್ತಿಗೊಂಡು ಅನುರಣನಗೊಳ್ಳುತ್ತದೆ. ಹುಡುಗಿಯ ಕೊನೆಯ ಈ ಕನಿಷ್ಠ ಬಯಕೆ ಕೂಡ ಈಡೇರಲಿಲ್ಲ, ಅಪ್ಪ, ಅಮ್ಮ, ಅಜ್ಜಿ ಯಾರೂ ಈ ಕರೆಗೆ ಓ ಗೊಡುವಂತಿರಲಿಲ್ಲ, ಓಗೊಡಲಿಲ್ಲ. ಹಾಗೆ ಕಾಫಿ ಕೇಳುತ್ತಲೇ 'ಪುಟ್ಟದೊಂದು ಜೀವವಂದು ಒರಗಿ ತಣ್ಣಗಾಯಿತು ! ಎರಡು ಕಣ್ಣು ಕಳೆದುಕೊಂಡು ಲೋಕ ಸಣ್ಣದಾಯಿತು, ಎಂಬ ಕವನದ ಕೊನೆ ಪುಟ್ಟ ಹುಡುಗಿಯ ದಾರುಣಅಂತ್ಯವನ್ನು ಹೇಳುತ್ತದೆ, ಅದು ಲೋಕದ ನಷ್ಟವೆಂಬುದನ್ನೂ ಹೇಳುತ್ತದೆ.

ವರ್ಗ ಹಿನ್ನೆಲೆಯಲ್ಲಿ ಮಹಿಳೆಯ ಬದುಕಿನ ಇನ್ನೊಂದು ಮುಖವನ್ನೂ ನಮ್ಮ ಕವಿಗಳು ಗುರುತಿಸಿದ್ದಾರೆ. ಶೋಷಿತಳಾಗುವ ಹೆಣ್ಣೇ ತನ್ನ ವರ್ಗ ಅಥವಾ ಜಾತಿಯ ಬಲದಿಂದ ಶೋಷಕಳಾಗಬಹುದು ಎಂಬುದೇ ಅದರ ಇನ್ನೊಂದು ಮುಖ. ಸಿದ್ದಲಿಂಗಯ್ಯನವರ 'ರಾಣಿಯ ಪ್ರೇಮ' ಈ ಬಗೆಯ ಒಂದು ಪದ್ಯ. ರಾಣಿಯಾದವಳು ತನ್ನ ಆಳನ್ನು ತನ್ನನ್ನು ಪ್ರೀತಿಸುವಂತೆ ಕೇಳಿದಳು. ಅದನ್ನು ಕವಿ ಹೀಗೆನ್ನುತ್ತಾರೆ :

ಕೊಕ್ಕರೆಯೊಂದು ಮೀನ ಪ್ರೀತಿಸಿತು ।
ಈ ಪ್ರೇಮದ ಗುಟ್ಟೇನು ?
ಮಸೆದ ಕತ್ತಿಯು ಕೊರಳ ಪ್ರೀತಿಸಿತು ।
ಈ ಒಲವಿನ ಪರಿಯೇನು ?

ಮನಸ್ಸುಗಳು ಒಪ್ಪಿ ಬೆರೆಯದ ಪ್ರೇಮವನ್ನು ಆಳು ನಿರಾಕರಿಸಿದ. ಪ್ರೀತಿಸಲು ಕೇಳಿದವಳು ಸಾಮಾನ್ಯ ಹೆಣ್ಣಾಗದೆ ರಾಣಿಯಾಗಿದ್ದರಿಂದ ಈ ನಿರಾಕರಣದ ಪರಿಣಾಮ ಬೇರೆಯಾಯಿತು :

ಜೀತಗಾರನು ಜೀವಭಯದಲ್ಲಿ
ಊರ ಬಿಡುವೆನೆಂದ
ಬೇಲಿ ಮರೆಯಲ್ಲಿ ಹೆಣ ಬಿದ್ದಿತ್ತು
ನೋಡಿ ಪ್ರೇಮದಂದ

ಅವಕಾಶಗಳ ಹಿನ್ನೆಲೆಯಲ್ಲಿ, ಮೌಢ್ಯದಿಂದ ಹೆಂಗಸು ಶೋಷಕಳಾಗುವ ಸ್ಥಿತಿಯನ್ನು ಇಂಥ ಕೆಲವು ಪ್ರಯತ್ನಗಳು ತೋರುತ್ತವೆ.

**ತಾಯಿ – ಮಗಳು**

ಅಸಹಜವಾದ, ಅತಿ ನಿರ್ಬಂಧಿತವಾದ ಗಂಡು-ಹೆಣ್ಣಿನ ಸಂಬಂಧಗಳಿರುವ ಸಮಾಜದಲ್ಲಿ ಹೆಣ್ಣುಹೆಣ್ಣಿನ ಸಂಬಂಧದಲ್ಲಿ ಆತ್ಮೀಯತೆಗೆ ಒಂದು ವಿಶೇಷ ಒತ್ತು ಬರುತ್ತದೆ. ಅದೇ ಹೊತ್ತಿನಲ್ಲಿ ಈ ವ್ಯವಸ್ಥೆಯಲ್ಲಿ ಹೆಣ್ಣು-ಹೆಣ್ಣಿನ ಸಹಜ ಸಂಬಂಧ ಮತ್ತು ಒಗ್ಗೂಡುವಿಕೆ ಕೂಡ ಹಾನಿಗೊಂಡಿದೆ ಎಂಬುದೂ ಗಮನಾರ್ಹ. ಒಂದು ಕಡೆಯಿಂದ ವರ್ಗ, ಜಾತಿ, ಸೌಂದರ್ಯಗಳಂಥ ಗೋಡೆಗಳಿದ್ದರೆ ಇನ್ನೊಂದೆಡೆ ಜೀವನದ ಸಾಧ್ಯತೆಗಳಿಲ್ಲದರಿಂದ ನೂಕಲ್ಪಟ್ಟು ಅವಲಂಬಿತ ಸ್ಥಿತಿಯಲ್ಲಿ ಒಬ್ಬಳಿಗೆ ಮಗನೂ ಸೋದರನೂ ಇನ್ನೊಬ್ಬಳಿಗೆ ಗಂಡನೂ ಆದವನಿಗೆ ಅತ್ತೆ-ಸೊಸೆಯರಾಗಿ, ಅತ್ತಿಗೆ-ನಾದಿನಿಯರಾಗಿ ಸ್ಪರ್ಧಿಸ ಬೇಕಾದ ಸಂದರ್ಭವಿದೆ. ಇಂಥ ಸಾಮಾಜಿಕ, ಕೌಟುಂಬಿಕ, ಹಿನ್ನೆಲೆಯಲ್ಲಿ ಹೆಚ್ಚು ಬೆಸುಗೆಗೊಳ್ಳುವ ಹೆಣ್ಣುಹೆಣ್ಣಿನ ಸಂಬಂಧವೆಂದರೆ ತಾಯಿಮಗಳ ಸಂಬಂಧ. ಶಿಕ್ಷಣ ಮತ್ತು ಹೊರಪ್ರಪಂಚಕ್ಕೆ ತೆರೆದುಕೊಳ್ಳುವ ಸಾಧ್ಯತೆಗಳಿಂದಾಗಿ ಮುಂದಿನ ತಲೆಮಾರುಗಳು ಮುಂದೆ ಹೋದಂತೆ ಸಂಕ್ರಮಣಾವಸ್ಥೆಯಲ್ಲಿ ತಾಯಿ-ಮಗಳ ಸಂಬಂಧದಲ್ಲಿಯೂ ಅಂತರ, ಬಿರುಕುಗಳು ಏರ್ಪಡಲು ಆರಂಭಿಸಿವೆಯಾದರೂ ನಮ್ಮ ವ್ಯವಸ್ಥೆಯಲ್ಲಿ ಅದೊಂದು ಗಾಢವಾದ ಸಂಬಂಧವಾಗಿ ಉಳಿದಿದೆ. ಮಹಿಳಾ ಚಳವಳಿಯೂ ಈ ಸಂಬಂಧದ ಮಹತ್ವಕ್ಕೆ ಒತ್ತು ಹಾಕಿದೆ.

ಮಹಿಳಾ ಸಾಹಿತ್ಯದಲ್ಲಿ ಈ ಸಂಬಂಧವು ವ್ಯಾಪಕವಾಗಿ ಅನ್ವೇಷಣೆಗೊಳ್ಳುವ ವಿಪುಲ ಅವಕಾಶಗಳಿವೆ. ಜನಪದ ಸಾಹಿತ್ಯದಲ್ಲಿ ಈ ಸಂಬಂಧದ ನಿಕಟತೆ, ತೀವ್ರತೆ ಶಕ್ತವಾಗಿ ಅಭಿವ್ಯಕ್ತಿಗೊಂಡಿದೆ. ಗಂಡಸ್ತನದ ಗೀಳಾಗಲೀ ಸ್ವಭಾವದಲ್ಲಿ ಕ್ರಿಯಾತ್ಮಕತೆಯ ಬಹುಮಟ್ಟಿನ ಗೈರುಹಾಜರಿಯಾಗಲೀ ಇಲ್ಲದ, ಆಧ್ಯಾತ್ಮಿಕತೆಯಿಂದ ಕೊಚ್ಚಿಹೋಗದ ನಮ್ಮ ಕೆಲವು ಕವಿಗಳು ಈ ಸಂಬಂಧದ ಸೌಂದರ್ಯ, ಸಂಕಟಗಳನ್ನು ತಮ್ಮ ಲೇಖನಿಯಲ್ಲಿ ಹಿಡಿದಿದ್ದಾರೆ. ತಮ್ಮ ಕಾವ್ಯಪ್ರತಿಭೆ ಮತ್ತು ವ್ಯವಸ್ಥಿತ ಸ್ಥಿತಿಸ್ಥಾಪಕ ಶಕ್ತಿಯಿಂದ ಈ ಯತ್ನಗಳಲ್ಲಿ ಯಶಸ್ವಿಯಾಗಿದ್ದಾರೆ. ಇದಕ್ಕೆ ಒಂದು ಒಳ್ಳೆಯ ನಿದರ್ಶನ ಕೆ. ಎಸ್. ನರಸಿಂಹ ಸ್ವಾಮಿಯವರ 'ಎಲ್ಲಿದ್ದೀಯೆ ಮೀನಾ' ಎಂಬ ಕವನ. ರೈಲ್ವೇ ನಿಲ್ದಾಣದಲ್ಲಿನ ತಾಯಿ ಮಗಳ ಅಗಲುವಿಕೆಯನ್ನು ಈ ಕವನ ಕೇಂದ್ರವಾಗಿ ಹೊಂದಿದೆ. ಬಾಣಂತನಕ್ಕೆ ತೌರಿಗೆ ಬಂದ ಮಗಳು ತಿರುಗಿ ಗಂಡನ ಮನೆಗೆ ಹೊರಟಿದ್ದಾಳೆ. ಇದೊಂದು ರೀತಿಯಲ್ಲಿ ದೀರ್ಘಕಾಲದ ಒಡನಾಟದ ಕೊನೆಯ ವಿದಾಯ. ಪಿತೃವಂಶೀಯ ಕುಟುಂಬ ವ್ಯವಸ್ಥೆಯಲ್ಲಿ ಮದುವೆಯ ನಂತರ ಹೆಣ್ಣು ಹುಟ್ಟಿದ ಮನೆಯನ್ನು ತೊರೆದರೂ ಮತ್ತೊಂದು ಆಸೆ ಮಿಂಚುತ್ತಿರುತ್ತದೆ. ಆ ಆಸೆಯೆಂದರೆ ಅವಳ ಮೊದಲ ಹೆರಿಗೆ. ಮೊದಲ ಹೆರಿಗೆಗೆ ತವರಿಗೆ ಬರುವ ಸಂಪ್ರದಾಯವಿರುವುದರಿಂದ ಆಗ ಮತ್ತೆ ಒಂದಿಷ್ಟು ಕಾಲ ತವರಿನಲ್ಲಿ ಇರಬಹುದೆಂಬ ಸಮಾಧಾನವಿರುತ್ತದೆ. ಆದರೆ ಮೊದಲ ಹೆರಿಗೆಗೆ ತವರಿಗೆ ಬಂದದ್ದು ಆದ ನಂತರ ಗಂಡನ ಮನೆಗೆ ಹೊರಡುವುದೆಂದರೆ ಅವಳ ಆ ಆಸೆಯೂ ಮುಗಿದಂತೆ. ಈ ಕವನದ ಸ್ಥಿತಿ ಅಂಥದು. ಅಂತೆಯೇ ಹಾಗೆ ಮಗಳನ್ನು ಕಳಿಸುವಾಗ ತಾಯಿಯ ಆತಂಕ ತಪ್ಪುವುದೇ ಇಲ್ಲ. ಏನೇನೋ ಸಣ್ಣ ವಸ್ತುಗಳನ್ನು, ಕಾರಣಗಳನ್ನು ಬಳಸಿ ಅದು ಸುತ್ತುತ್ತಿದೆ. ಮಗುವಿನ ಹಾಲಿಗೆ ಬಿಸಿ ನೀರಿದೆಯೇ, ಮಗುವಿನ ಕಣ್ಣಿಗೆ ಕಪ್ಪು ಹಚ್ಚಿದೆಯೇ–ಇಂಥ ಕಾರಣಗಳು. ಈ ಎಲ್ಲವೂ ಕೊನೆಯ ಕ್ಷಣದ ಮೌನ, ಆತಂಕ, ಶೂನ್ಯತೆಯನ್ನು ತೋರುವಂಥವು. 'ತೊಟ್ಟಿಲು ಪೆಟ್ಟಿಗೆ ಹಾಸಿಗೆ' ವಿಚಾರಿಸಿದರೂ ತಾಯಿಗೆ ಏನನ್ನೋ ಮರೆತಂತೆ ತೋರುತ್ತದೆ, ಮಗಳು ನೆನನ್ನೋ ನೆನೆವಂತೆ ತೋರುತ್ತದೆ. 'ಘಂಟೆಯ ಹೊಡೆತಕೆ, ಸಿಳ್ಳಿಗೆ, ಬೀಸಿದ ಬಾವುಟಕೆ, ನಡುಗುತ್ತಿದೆ ಬಂಡಿಯ ಮೈ, ದೀಪದ ಬೆದರಿಕೆಗೆ' ಎಂಬ ಬಂಡಿಯ ಚಿತ್ರ ತಾಯಿ-ಮಗಳಿಬ್ಬರ ಸ್ಥಿತಿಗೂ ಪ್ರತಿಮೆಯಾಗುತ್ತದೆ. ಇಷ್ಟು ವರ್ಷಗಳ ಒಡನಾಟ, ಸಹಬದುಕಿಗೆ ಇಬ್ಬರೂ ಸಂಕಟದಿಂದ ವಿದಾಯ ಹೇಳಬೇಕಾದ ಸಂದರ್ಭ ಇದಾಗಿದೆ. 'ಎಲ್ಲಿದ್ದೀಯಾ ಮೀನಾ' ಎಂಬ ತಾಯಿಯ ಕೂಗು ಎಂಜಿನ್ನಿನ ಕೂಗಿನಂತೆ ಕಂಬಿಯುದ್ದಕ್ಕೂ ಹಬ್ಬಿತು ಎಂಬುದು ಹಾಗೂ ಕಿಡಿಗಳು ಹೊರಳುವ ಹೊಗೆಯಲ್ಲಿ ಹೆಗ್ಗಾಲಿಗಳ ಉರುಳಿನಂತೆ 'ಇಲ್ಲೇ ಇದ್ದೇನಮ್ಮ' ಎಂಬ ಮಗಳ ಓಗೊಡುವಿಕೆ ತಾಯಿ-ಮಗಳ ಸಂಬಂಧದ ಗಾಢತೆಯನ್ನು ಎತ್ತಿ ತೋರುತ್ತದೆ.

ಪರಂಪರಾಗತವಾಗಿ ಬಂದ ಸ್ತ್ರೀಯರ ಮೇಲಿನ ನಿರ್ಬಂಧಗಳನ್ನು ಸ್ತ್ರೀಯರ ಮೂಲಕವೇ ತಲೆಮಾರಿನಿಂದ ಸಾಗಿಸುವ ವ್ಯವಸ್ಥೆಯು ವ್ಯವಸ್ಥೆಯಲ್ಲಿರುವುದರಿಂದ ತಾಯಿಯ ಮೂಲಕ ಆ ಮೌಲ್ಯಗಳು ಬರುವುದರಿಂದ ತಾಯಿಯೇ ತನ್ನ ಎದುರಾಳಿಯೆಂದು ಹದಿಹರೆಯದ ಹುಡುಗಿ ತಿಳಿಯುವ ಸಂದರ್ಭವಿದೆ. ಸ. ಉಷಾ ಅವರ 'ಅಮ್ಮ'ನಿಗೆ ಎಂಬ ಕವನ ಈ ದಿಕ್ಕಿನದು. 'ನಿನ್ನಂತಾಗದೆ ಬದುಕುತ್ತೇನೆ ನನಗೆ ದಾರಿ ಬಿಡು' ಎಂಬುದು ಇಲ್ಲಿಯ ಮಗಳ ಒತ್ತಾಯ. ತನ್ನ ತಾಯಿಯ ಬದುಕಿಗಿಂತ ಬೇರೆಯಾದ ಬದುಕನ್ನು ತಾನು ಬದುಕಬೇಕೆಂಬ ಉತ್ಸಾಹದಲ್ಲಿ ಇಲ್ಲಿಯ ಮಗಳಿದ್ದಾಳೆ. ವರದಕ್ಷಿಣೆಯ ಹಿಂಸೆ, ಹೆಂಡತಿಯನ್ನು ಬಿಡುವಿಕೆಯೇ ಮೊದಲಾದವು ಹೆಚ್ಚುತ್ತಿರುವ ಸಂದರ್ಭದಲ್ಲಿ ಮಗಳ ಬದುಕಿಗೆ ಕೈಲಾದ ಮಟ್ಟಿಗೂ ತಾಯಿ ಆಸರೆಯಾಗಿ ನಿಲ್ಲಬೇಕೆಂಬ ಹಂಬಲವೂ ವ್ಯಕ್ತವಾಗಿದೆ.

### ತಂದೆ – ಮಗಳು

ತಂದೆ - ಮಗಳ ಸಂಬಂಧವೂ ಹೆಣ್ಣಿನ ಬದುಕನ್ನು ರೂಪಿಸುವ ಒಂದು ಪ್ರಬಲ ಅಂಶ. ಪ್ರಗತಿ ಸಾಧಿಸಿದ ಹಲವು ಮಹಿಳೆಯರ ಬದುಕಿನ ಹಿಂದೆ ಆ ಮಹಿಳೆಯರ ತಂದೆಯಂದಿರು ರೂವಾರಿಗಳಾಗಿರುವುದನ್ನು ಕಾಣುತ್ತೇವೆ. ತಂದೆ-ಮಗಳ ಗಾಢ ಸಂಬಂಧಕ್ಕೆ ಕೆ. ಎಸ್. ನರಸಿಂಹ ಸ್ವಾಮಿ, ಬೇಂದ್ರೆ, ಗಂಗಾಧರ ಚಿತ್ತಾಲ, ಪು.ತಿ.ನ ಮೊದಲಾದ ಕವಿಗಳು ದನಿ ನೀಡಿದ್ದಾರೆ. 'ತುಂಗಭದ್ರೆ' ಎಂಬ ಕವನದಲ್ಲಿ ಕೆ. ಎಸ್. ನರಸಿಂಹಸ್ವಾಮಿಯವರು ವರುಷದ ಮಗಳು ತುಂಗಭದ್ರೆಯನ್ನು 'ಇವಳೆನ್ನ ದೇವರಾಗಿಹಳು' ಎನ್ನುತ್ತಾರೆ. 'ಮಗುವಿನ ನಗು' ಎಂಬ ಪುತಿನ ಅವರ ಕವನವು ಹೆಣ್ಣು ಮಗುವಿನ ನಗೆಯ

ಸೌಂದರ್ಯದ ರಹಸ್ಯವನ್ನು ಕುರಿತಾಗಿದೆ. ಮಗುವಿನ ಕಿರುನಗೆ ಕಣ್ಣೊಳಗಿದ್ದು ಬಾಯೊಳಗೆ ಉಕ್ಕಿದಂತೆ ಕವಿಗೆ ತೋರುತ್ತದೆ. 'ಮಗಳಿಗೆ ತಂದೆಯ ಬುದ್ಧಿವಾದ' ಎಂಬ ಎಚ್ಚೆಸ್ಕೆಯವರ ಕವನವು ಇಂದಿನ ವರದಕ್ಷಿಣೆಯ ಸಮಸ್ಯೆಯ ಹಿನ್ನೆಲೆಯಲ್ಲಿ ನೊಂದ ತಂದೆಯು ಹೇಳಿದ ಬುದ್ಧಿವಾದವಾಗಿದೆ. ಕೈತುಂಬ ಸಂಬಳದ ಕೆಲಸವಿರುವ ಮಗಳಿಗೆ ದಕ್ಷಿಣೆ ಬೇಡುವ ವರನ ಆಸೆಯನ್ನು ಬಿಡುವಂತೆ ಹೇಳುತ್ತಾ ಹೀಗೆನ್ನುತ್ತಾರೆ :

ಕಾಯಿ ಶಬರಿಯ ಮಾದರಿ
ಇಲ್ಲವಾದರೆ ಅಹ
ಲ್ಯೆಯ ಹಾಗೆ ಕಲ್ಲಾಗು
ಎಂದಾದರಾದೀತು
ಈ ಶಾಪವಿಮೋಚನೆ.
ರಾಮನೇ ಬಂದಾನು
ಆದರೆಚ್ಚರವಿರಲಿ :
ನಿನ್ನ ಹೃದಯದ ಮೇಲೆ
ಕಾಲು ತಾಕಿಸದಿರಲಿ.

**ಪುರಾಣ ಭಂಜಕತೆ**

ಇದುವರೆಗಿನ ಸ್ತ್ರೀಯರ ಮೌಲ್ಯಗಳಿಗೆ ಮಾದರಿಗಳಾಗಿ ಸ್ವೀಕರಿಸುತ್ತಿದ್ದ ಪೌರಾಣಿಕ ಪಾತ್ರಗಳನ್ನು ಹೊಸ ಸ್ತ್ರೀ ಮೌಲ್ಯಗಳ ಹಿನ್ನೆಲೆಯಲ್ಲಿ ಚಿಕಿತ್ಸಕ ದೃಷ್ಟಿಯಿಂದ ನೋಡಿ ಅಪಾಯಕಾರಿಯಾದ ಪೌರಾಣಿಕ ಮಾದರಿಗಳನ್ನು ಪ್ರಶ್ನಿಸುವ, ನಾಶಪಡಿಸುವ ಪ್ರವೃತ್ತಿಯೂ ಆಧುನಿಕ ಕಾವ್ಯದಲ್ಲಿ ಪ್ರಬಲವಾಗಿದೆ. ವಿಶೇಷವಾಗಿ ಮಹಿಳಾ ಕಾವ್ಯದಲ್ಲಿ ಈ ಪ್ರಾಬಲ್ಯ ಎದ್ದುಕಾಣುತ್ತದೆ. ಕೆ. ಎಸ್. ನರಸಿಂಹಸ್ವಾಮಿಯವರು 'ಸೀತೆಯ ಭಾಗ್ಯ' ಎಂಬ ಕವನದಲ್ಲಿ ಸೀತೆಗೆ ಸಂದ ಅನ್ಯಾಯವನ್ನು ಗಮನಿಸುತ್ತಾರೆ. 'ರಾಮಾಯಣದ ಅಂಕಿತವೆ ಒಂದು ಅನ್ಯಾಯ ಸೀತೆಯ ಕಥೆಗೆ' ಎಂಬ ಪ್ರತಿಕ್ರಿಯೆ ಕವಿಯದು. ಸ್ತ್ರೀಯರ ಪಾತಿವ್ರತ್ಯ ಮಾದರಿಗಳನ್ನು ಕುರಿತು ಮುಕ್ತಾಯಕ್ಕ ತಮ್ಮ 'ನಾವು ಪತಿವ್ರತೆಯರಲ್ಲ' ಎಂಬ ಕವನದಲ್ಲಿ ಈ ತಲೆಮಾರಿನ ಸ್ಪಂದನವನ್ನು ವ್ಯಕ್ತಮಾಡಿದ್ದಾನೆ. ಪಾತಿವ್ರತ್ಯದ ಕಲ್ಪನೆಯಲ್ಲಿ ಬೆಂದ ಮಹಿಳೆ ಜೀವಂತ ಶವವಾಗಿರುವ ಸ್ಥಿತಿಯನ್ನು ಅವರು ಅಲ್ಲಿ ಗುರುತಿಸುತ್ತಾರೆ. ದ್ರೌಪದಿ, ಕುಂತಿ ಮೊದಲಾದ ಪಾತ್ರಗಳ ಬಗ್ಗೆ ಮೆಚ್ಚುಗೆ, ಸೀತೆ, ಶಕುಂತಲೆ ಮೊದಲಾದವರ ಅವ್ಯಕ್ತ ಪ್ರತಿಕ್ರಿಯೆಗಳಿಗೆ ವ್ಯಕ್ತತೆ, ಸಮಾನಾಂತರ ಹಾಗೂ ವಿಭಿನ್ನ ಸಂದರ್ಭಗಳ ಸೃಷ್ಟಿ ಮೊದಲಾದವೆಲ್ಲ ಪುರಾಣ ಸ್ವೀಕಾರದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಸೂಚಿಸುತ್ತವೆ.

ಒಟ್ಟಿನಲ್ಲಿ ಆಧುನಿಕ ಕಾವ್ಯದಲ್ಲಿ ಸ್ತ್ರೀಯರ ಬದುಕು ಮೌಲ್ಯಗಳನ್ನು ಕುರಿತಾದ ಸ್ಪಂದನ, ಚಿಂತನ, ಪ್ರತಿಕ್ರಿಯೆಗಳು ಹಿಂದೆಂದೂ ಇಲ್ಲದಷ್ಟು ವಿಪುಲವಾಗಿವೆ, ವಿಭಿನ್ನವಾಗಿವೆ. ಮಹಿಳೆಯರ ಬದುಕಿನಲ್ಲಿ, ಚಿಂತನೆಯಲ್ಲಿ ಆಗುತ್ತಿರುವ ಬದಲಾವಣೆಗಳು, ಮಹಿಳೆಯರ ಬದುಕನ್ನು ಕುರಿತ ಸಮಾಜದ ದೃಷ್ಟಿಕೋನದಲ್ಲಿ ಆಗುತ್ತಿರುವ ವ್ಯತ್ಯಾಸಗಳು, ಆಧುನಿಕ ಪರಿಸರದಲ್ಲಾಗುತ್ತಿರುವ ಬದಲಾವಣೆಗಳು ಆಧುನಿಕ ಕಾವ್ಯದಲ್ಲಿ ಮಹಿಳೆಯರ ಚಿತ್ರ ಬದಲಾಗಲೇಬೇಕಾದ ಒತ್ತಡವನ್ನು ತಂದಿವೆ. ಪುರುಷರ ಬರಹಗಳಲ್ಲೂ ಈ ಬದಲಾವಣೆ ಸ್ಪಷ್ಟವಾಗಿ ಕಾಣುತ್ತಿದೆ. ಹಿಂದೆಂದೂ ಇಲ್ಲದ ಪ್ರಮಾಣ ಮತ್ತು ಗುಣಮಟ್ಟದ ಮಹಿಳಾ ಕಾವ್ಯವು ಹೊಸ ಸವಾಲುಗಳನ್ನು ಎದುರಿಸುತ್ತಾ ವಿಶಿಷ್ಟವಾಗಿ, ಸ್ವತಂತ್ರವಾಗಿ ಬೆಳೆಯುತ್ತಿರುವ ಇಂದಿನ ಸಂದರ್ಭದಲ್ಲಿ ಮಹಿಳೆಯರ ಬದಲಾಗುತ್ತಿರುವ ಬಾಹ್ಯ ಮತ್ತು ಆಂತರಿಕ ಜಗತ್ತಿಗೆ ದನಿಯಾಗಿ ಆಧುನಿಕ ಕಾವ್ಯ ಬೆಳೆಯುತ್ತಿದೆ.



# ಜನಪದ ತ್ರಿಪದಿಗಳಲ್ಲಿ ಹೆಣ್ಣು

● ಡಾ|| ಚಂದ್ರಮತಿ ಸೋಂದಾ

ಜನಪದ ಸಾಹಿತ್ಯದ ಪ್ರಮುಖ ಪ್ರಕಾರಗಳೆಂದರೆ, ಗೀತೆಗಳು, ಕಥನ ಕವನಗಳು, ಕತೆಗಳು ಮತ್ತು ಗಾದೆಗಳು. ಈ ಜನಪದ ಸಾಹಿತ್ಯ ಪ್ರಕಾರಗಳೆಲ್ಲ ಮೌಖಿಕ ಸಂಪ್ರದಾಯಕ್ಕೆ ಸೇರುವುದರಿಂದ ಅವುಗಳ ರಚನಾ ಕಾಲವನ್ನು ನಿರ್ಧರಿಸುವುದು ಕಷ್ಟ. ಅದೇ ರೀತಿ ಇವನ್ನು ರಚಿಸಿದವರ ಜಾತಿ-ವರ್ಗಗಳನ್ನು ಕೂಡ ಸಮಂಜಸವಾಗಿ ಗುರುತಿಸಲು ಸಾಧ್ಯವಿಲ್ಲ. ವಸ್ತು ಹಾಗೂ ವಿಷಯದ ಹಿನ್ನೆಲೆಯಲ್ಲಿ ರಚನೆಯಾದ ಸಂದರ್ಭಗಳನ್ನು ಮಾತ್ರ ಊಹಿಸಬಹುದು. ಹೆಣ್ಣು ಮಕ್ಕಳು ಗೃಹಕೃತ್ಯದಲ್ಲಿ ತೊಡಗಿರುವಾಗ ತಮ್ಮ ಮನಸ್ಸನ್ನು ಹಗುರಗೊಳಿಸಲು ಹಾಡಿಕೊಂಡ ಗೀತೆಗಳು ಜನಪದ ತ್ರಿಪದಿಗಳು. ಈ ತ್ರಿಪದಿಗಳನ್ನು ಗರತಿಯ ಹಾಡು ಎಂದು ಕರೆಯಲಾಗಿದೆ. ಈ ಹಾಡುಗಳಲ್ಲಿ ಆಕೆ ತನ್ನನ್ನು ಹೇಗೆ ಕಂಡಿದ್ದಾಳೆ ಎನ್ನುವುದನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶ.

ಪರಂಪರಾಗತವಾಗಿ ಸಮಾಜ ಒಪ್ಪಿಕೊಂಡು ಬಂದಿರುವ ಮೌಲ್ಯದ ಹಿನ್ನೆಲೆಯಲ್ಲಿಯೇ ಇಲ್ಲಿಯೂ ಹೆಣ್ಣು ಮಕ್ಕಳು ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸಿದ್ದಾರೆ. ವ್ಯಕ್ತಿಯ ಜೀವನದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯ ಎಂಬ ಮೂರು ಘಟ್ಟಗಳಿವೆ. ಈ ಘಟ್ಟಗಳನ್ನು ತ್ರಿಪದಿಗಳಲ್ಲಿ ಮಗಳು, ಸೊಸೆ ಮತ್ತು ತಾಯಿ ಎಂದು ಗುರುತಿಸಿಕೊಂಡಿದ್ದೇನೆ.

ಹೆಣ್ಣು ಮಗುವಿನ ಬಗೆಗೆ ಎರಡು ರೀತಿಯ ಅನಿಸಿಕೆಗಳನ್ನು ಈ ತ್ರಿಪದಿಗಳಲ್ಲಿ ನೋಡಬಹುದು. ಮಗಳಾಗಿ ಹುಟ್ಟಿದ್ದಕ್ಕೆ ಆಕೆಯ ಅನಿಸಿಕೆಯೇನು ಎನ್ನುವುದು ಹಾಗೂ ಹೆಣ್ಣು ಮಗುವನ್ನು ಕುರಿತ ಒಟ್ಟಾರೆ ಅನಿಸಿಕೆ.

> ನ್ಯಾಯಕ್ಕೆ ಕಣ್ಣಿಲ್ಲ ಪ್ರೀತಿಗೆ ಬೆಲೆಯಿಲ್ಲ
> ಹೆಣ್ಣೆಂಬನ ಗೋಳಿಗೆ ಕೊನೆಯಿಲ್ಲ । ಅಣ್ಣಯ್ಯ
> ಕಣ್ಣೀರೆ ನಾರಿ ಬಾಳೆಲ್ಲ ॥
> ಲೋಕಕಿಲ್ಲದ ಮಗಳ ಯಾಕ್ಹೆತ್ತೆ ತಾಯಮ್ಮ
> ಅಟ್ಟಿಬಿಡಿರಮ್ಮ ಅಡವೀಗೆ ॥

ಎನ್ನುವಲ್ಲಿ ನೋವು, ಅಸಹಾಯಕತೆ ಮುಖ್ಯವಾಗಿದೆ. ಹೆಣ್ಣಿಗೆ ಹುಟ್ಟಿದ ಮನೆಯು ನಿಜವಲ್ಲ, 'ಹೆಣ್ಣಾಟ್ಟಿ, ಹೆರರ ಮನೆಗಾಗಿ' ಎಂಬಂತಹ ಮಾತುಗಳಲ್ಲಿ ಆಕೆಯ ಬಗೆಗೆ ಉಪೇಕ್ಷೆಯಿದೆ. ಇದರ ಪರಾಕಾಷ್ಠೆಯನ್ನು ಮುಂದಿನ ತ್ರಿಪದಿಯಲ್ಲಿ ಕಾಣುತ್ತೇವೆ.

> 'ಹೆಣ್ಣು ಹುಟ್ಟಿದ ಮನಿ ಹೆಗ್ಗಣತ್ತಿದಾಂಗ
> ಗಂಡಸ ಮಗ ಗಜಭೀಮ ಹುಟ್ಟಿದರ
> ಚಿಲಕ ಚಿತ್ತಾರ ನಗುತಾವ ॥

ಮಕ್ಕಳ ಬಗೆಗೆ ಅಕ್ಕರಾಸ್ಥೆ ತೋರುವಲ್ಲಿಯೂ ಗಂಡು ಮಗುವಿನ ಬಗೆಗಿನ ವಾತ್ಸಲ್ಯವೇ ಪ್ರಧಾನವಾಗಿದೆ. ನಾನು ಪರಿಶೀಲಿಸಿರುವ ನಾಲ್ಕು ಸಂಕಲನಗಳಲ್ಲಿ ಸುಮಾರು 130 ತ್ರಿಪದಿಗಳು ಗಂಡು ಮಗುವಿನ ಬಗೆಗಿದ್ದರೆ ಕೇವಲ ಎರಡು ತ್ರಿಪದಿಗಳು ಮಾತ್ರ ಹೆಣ್ಣು ಮಗುವನ್ನು ಕುರಿತಂತೆ ಇತ್ತೆನ್ನುವುದು ಗಮನಿಸಬೇಕಾದ ಅಂಶ.

> ನನ್ನಯ್ಯನಂಥೋರು ಹನ್ನೆರಡು ಮಕ್ಕಳು
> ಹೊನ್ನೆಯ ಮರದ ನೆರಳಲ್ಲಿ ಆಡುವಾಗ
> ಸಂನ್ಯಾಸಿ ಜಪವ ಮರೆತಾನು ॥
> ನನ್ನಯ್ಯ ನೀ ಬಾಳು ಇನ್ನು ಸಾವಿರ ಕಾಲ
> ಹೊನ್ನೆಯ ಮರದ ಗರಿಕೆಯ । ಬೇರಂತೆ
> ಮೊಮ್ಮಕ್ಕಳೆತ್ತಿ ಸುಖಿಯಾಗು

ಈ ಮೇಲಿನ ತ್ರಿಪದಿಗಳಲ್ಲಿ ಹಾಗೂ 'ಮಾರಾಯರಂಥ ಮಗ ಮುಂದೆ ಮಲಗಿದರ ಮಾರಾಯ್ರು ಗೊಡವೆ ನಮಗ್ಯಾಕ' ಎನ್ನುವಲ್ಲಿ ಹೆಣ್ಣು ಮಗುವನ್ನು ಕಡೆಗಣಿಸಿದ್ದನ್ನು ಕಾಣಬಹುದು. ಇಂತಹ ವಾತಾವರಣದಿಂದಾಗಿ ಮಗಳಾಗಿ ಹುಟ್ಟುವುದೇ ಒಂದು ಶಾಪ ಎಂದುಕೊಂಡ ಹೆಣ್ಣುಮಗಳು

> ತಾವರೆಯ ಗಿಡ ಹುಟ್ಟಿ ದೇವರಿಗೆ ನೆರಳಾದೆ
> ನಾ ಹುಟ್ಟಿ ಮನೆಗೆ ಎರವಾದೆ । ನನ ತಮ್ಮ
> ತಾ ಹುಟ್ಟಿ ಮನೆಗೆ ಧಣಿಯಾದ ॥

ಎಂದು ತನ್ನನ್ನು ತಮ್ಮನೊಂದಿಗೆ ಹೋಲಿಸಿಕೊಂಡು ನೋಯುವುದು ಸಹಜ.

> ಹೆಣ್ಣಾಗಿ ಹುಟ್ಟೋಕಿಂತ ಮಣ್ಣಾಗಿ ಹುಟ್ಟಿದರೆ
> ಮಣ್ಣಿನ್ಮೇಲೊಂದು ಮರವಾಗಿ ಹುಟ್ಟಿದರೆ
> ಪುಣ್ಯವಂತರಿಗೆ ನೆರಳಾಗಿ ॥

ಮಣ್ಣು ಮರದ ಹುಟ್ಟಿಗೆ ಕಾರಣವಾಗಿ ಜನರಿಗೆ ನೆರಳನ್ನು ಕೊಡಬಲ್ಲುದು. ಅದಕ್ಕಿಂತಲೂ ತನ್ನ ಬದುಕು ಕಡೆ ಎನ್ನುವಷ್ಟು ಆಕೆಗೆ ಬದುಕಿನ ಬಗ್ಗೆ ಬೇಸರ ಬರುವಂತಹ ವ್ಯವಸ್ಥೆಯಲ್ಲಿದ್ದ ಆಕೆ 'ಹಂಗಿನ ತವರ ಮನೆ ಸಾಕು' ಎಂದು ರೋಸಿ ಹೋಗುವುದು ಸ್ವಾಭಾವಿಕ. ಆದಾಗ್ಯೂ ಆಕೆ ಹುಟ್ಟಿದ ಮನೆಯನ್ನು 'ಹಬ್ಬಲಿ ನನ್ನ ರಸಬಳ್ಳಿ' ಎಂದೇ ಹಾರೈಸುತ್ತಾಳೆ. ಆಕೆ ತವರ ಸಂಬಂಧವನ್ನು ನಿರಾಕರಿಸುವುದಿಲ್ಲ.

ಹೆಣ್ಣಿನ ಜನುಮಕೆ ಅಣ್ಣ ತಮ್ಮರು ಬೇಕು
ಬೆನ್ನು ಕಟ್ಟುವರು ಸಭೆಯೊಳಗೆ । ಸಾವಿರ
ಹೊನ್ನು ಕಟ್ಟುವರು ಉಡಿಯೊಳಗೆ ॥

ಆಕೆ ಒಡ ಹುಟ್ಟಿದ ಅಣ್ಣ - ತಮ್ಮಂದಿರ ಒಳಿತನ್ನು ಹಾರೈಸುವಂತೆ ಅಕ್ಕ-ತಂಗಿಯರ ಬಗ್ಗೆ ಏನನ್ನೂ ಹೇಳುವುದಿಲ್ಲ. ಅವರೂ ಕೂಡ ಆಕೆಯಂತೆ ಇನ್ನೊಂದು ಮನೆಗೆ ಸೇರುವವರಾದ್ದರಿಂದ ಆಕೆಯ ತವರ ಸಂಬಂಧ ಮುಂದುವರಿಯುವುದು ಅಣ್ಣ ತಮ್ಮಂದಿರೊಂದಿಗೆ ಮಾತ್ರ. ಇಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕುವ ಆಕೆಗೆ ಒಟ್ಟಾಗಿ ಬೆಳೆದೂ ಅಕ್ಕ ತಂಗಿಯರನ್ನು ನೆನೆಯದಿರುವುದು ಅನಿವಾರ್ಯವಾಗಿದೆ.

ಮಗಳನ್ನು ಮದುವೆ ಮಾಡಿ ಕಳುಹಿಸುವಾಗಲೂ 'ಅತ್ತೆ ಮಾವರಿಗಂಜಿಸುತ್ತೇಳು ನೆರೆಗಂಜಿ' ಬದುಕಬೇಕೆನ್ನುವ, ಮತ್ತು 'ಅತ್ತೆಯ ಮನೆಯಾಗ ಹತ್ತೆಂಟು ಬೈದರೆ ಉತ್ತರ ಬೇಡ ನನ ಮಗಳೆ' ಎನ್ನುವ ಉಪದೇಶಗಳು ಅವಳ ಪಾಲಿಗಿವೆ.

ಇನ್ನು ಸೊಸೆಯಾಗಿ ಆಕೆಯ ಬದುಕು ಅಂತಹ ಮಾರ್ಪಾಡಿಗೇನೂ ಒಳಗಾಗುವುದಿಲ್ಲ. ಅಲ್ಲಿಯೂ ಆಕೆ ತನ್ನಿಷ್ಟದಂತೆ ಬದುಕುವಂತಿಲ್ಲ. 'ತವರಿಗೆ ಮಾತು ತಂದವಳು ಮಗಳಲ್ಲ' ಎನ್ನುವ ಧೋರಣೆಯಿಂದ ಅವಳನ್ನು ಬೆಳೆಸಿರುವುದರಿಂದ,

'ಬಾಳುವೆ ಮಾಡಿದರೆ ಬಾ ತಂಗಿ ಅಂದಾರು
ಬಾಳುವೆಗೆಟ್ಟು ಮತಿಗೆಟ್ಟು । ಬಂದರೆ
ಹೆತ್ತವರ ಕುಲಕೆ ಹಗೆಯಾದೆ ॥

ಎನ್ನುವುದು ಆಕೆಗೆ ಮನದಟ್ಟಾಗಿದೆ. ಹಾಗಾಗಿ, ಆಕೆ ಎಷ್ಟೇ ನೋವನ್ನು ಅನುಭವಿಸಲಿ, ಅಲ್ಲಿಯೇ ಬದುಕನ್ನು ಸವೆಸಬೇಕಾಗಿದೆ. ಬೇರೆಯ ನೋವು ಏನೇ ಇರಲಿ, ಆಕೆ ಗಂಡನ ಪ್ರೀತ್ಯಾದರಗಳ ಬಗೆಗೂ ಮಾತನಾಡುವಂತಿಲ್ಲ.

ಪರಿಮಳದರಸರು ಪರನಾರಿಗ್ಹೋದರೆ
ಮನೆಮಡದಿ ಬಾಯ ಬಿಡಬೇಡ। ತಾವ್ತಮ್ಮ
ಮನ ಹೇಸಿ ಮನೆಗೆ ಬರುತಾರೆ ॥

ಎನ್ನುವಂತಹ ಮಾತನ್ನು ನಂಬಿದ ಆಕೆ 'ನಾ ಮುಂಚೆ ಮುಡಿದ ಪರಿಮಳದ ಹೂವ ಅವಳೊಂದು ಘಳಿಗೆ ಮುಡಿಯಲಿ' ಎಂದುಕೊಂಡು, ಆತನ ಮೊದಲ ಪ್ರೀತಿ ದಕ್ಕಿದ್ದು ತನಗೆ ಎಂಬ ಸುಳ್ಳು ಸಮಾಧಾನವನ್ನು ತಾಳುವುದು ಅನಿವಾರ್ಯ. ಆಕೆ ಗಂಡನ ಅನ್ಯ ಸಂಬಂಧಗಳ ಬಗ್ಗೆ 'ಅಂಗಿ ಮೇಲಂಗಿ ಛಂದೇನೋ ನನರಾಯ' ಎಂದು ಕೇಳಬಹುದೆ ವಿನಾ ನೇರವಾಗಿ ವಿರೋಧಿಸುವ, ಜಗಳಾಡುವ, ಪ್ರಶ್ನಿಸುವ ಗಟ್ಟಿತನವನ್ನು ಕಾಣಲಾರೆವು. ಯಾಕೆಂದರೆ, 'ಶೀಲ'ದ ಕಲ್ಪನೆ ಹೆಣ್ಣಿಗೆ ಮಾತ್ರ ಸೀಮಿತ. ಹಾಗಾಗಿ ಆಕೆ ಬಾಯಿಬಿಡುವಂತಿಲ್ಲ.

ತವರವರು ಮಗಳನ್ನು ಒಪ್ಪಿಸುವಾಗ 'ನಗುನಗುತ ಮನೆ ಬೆಳಗುವಳು' ಎಂದು ಹೇಳುವುದರಲ್ಲಿ ಅವರಿಗೆ ಅವಳು ಹೇಗೆ ಬದುಕುತ್ತಾಳೆನ್ನುವುದು ಮುಖ್ಯವಲ್ಲ. ಆ ಮನೆಯನ್ನು ಬೆಳಗುವುದೇ ಅವಳ ಬಾಳಿನ ಗುರಿ ಎನ್ನುವ 'ಆದರ್ಶ'ವನ್ನು ಕಾಣುತ್ತೇವೆ. ಹಾಗಾಗಿ, ಆಕೆಗೆ ಹೋದ ಮನೆಯಲ್ಲಿ ಸ್ಥಾನ ಸಿಗುವುದು ತಾಯಾದಲ್ಲಿ ಮಾತ್ರ. 'ಕಂದ ಇದ್ದವಳಿಗೆ ಗಂಗಾದೇವೆಂದು ಕರಿ'. ಮಗುವಿದ್ದಲ್ಲಿ ಆಕೆ ಗಂಗೆಯಷ್ಟು ಪವಿತ್ರಳು. ಇಲ್ಲದಿದ್ದರೆ ಆಕೆಯ ಬದುಕು

ಬಾಲಕರಿಲ್ಲದ ಬಾಲದ್ಯಾತರ ಜನ್ಮ
ಬಾಡಗಿ ಎತ್ತು ದುಡಿದಂಗ । ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದಂಗ ॥

ಅಷ್ಟು ನೀರಸ. ಅದರಲ್ಲಿಯೂ ಆಕೆ ಆ ಮನೆಯ ಋಣವನ್ನು ತೀರಿಸಲು ಗಂಡು ಮಗುವನ್ನೇ ಹೆರಬೇಕು. ಇಲ್ಲದಿದ್ದರೆ ಗಂಡನ ಮನೆಯ ಊಟ ಆಕೆಗೆ 'ಹಂಗಿನ ಬಾನ'. ಹಾಗಾಗಿ, ಆಕೆ ಶಿವನನ್ನು ಬೇಡುವುದು ಹೀಗೆ :

'ಕಂದನ ಕೊಡು ಶಿವನೆ ಬಂಧನ ಬಿಡಲಾರೆ
ಹಂಗಿನ ಬಾನ ಉಣಲಾರೆ । ಮರ್ತ್ಯದಾಗ
ಬಂಜೆಂಬ ಶಬುದ ಹೊರಲಾರೆ ॥

ಆಕೆಯ ದೋಷವಿರಲಿ ಇಲ್ಲದಿರಲಿ ಬಂಧನಕ್ಕೆ, ಬಂಜೆ ಎಂಬ ಅಪವಾದ ಹೊರುವವಳು ಆಕೆಯೇ.

ತಾಯಿಯಾಗಿ ಆಕೆಯ ಸ್ಥಾನ ಸ್ವಲ್ಪ ಉತ್ತಮ. ಇಲ್ಲಿಯೂ ತ್ಯಾಗ, ಸಹನೆಗಳ ಪ್ರತೀಕವಾಗಿಯೇ ಆಕೆಯ ತಾಯ್ತನವಿದೆ. ಆಕೆಗೆ ಪ್ರೀತ್ಯಾದರಗಳನ್ನು, ಮೆಚ್ಚಿಕೆಯನ್ನು ವ್ಯಕ್ತಪಡಿಸುವವರು ಹೆಣ್ಣು ಮಕ್ಕಳು.

ಕಾಸಿಗೆ ಹೋಗಲಕ ಏಸೊಂದು ದಿನಬೇಕು
ತಾಸ್ಹೊತ್ತಿನ್ಹಾದಿ ತವರೂರ। ಮನಿಯಾಗ
ಕಾಸಿ ಕುಂತಾಳೆ ಹಡೆದವ್ವ ॥

ಎಂದು ತಾಯನ್ನು ಪವಿತ್ರತೆಗೆ, ಪೂಜ್ಯತೆಗೆ ಹೋಲಿಸುವವರು ತವರನ್ನು ಹಂಬಲಿಸುವ ಹೆಣ್ಣು ಮಕ್ಕಳು. ಮಗಳಿಗೆ ಎಲ್ಲರಿಗಿಂತ ತಾಯಿಯ ಮೇಲೇ ಮಮತೆ ಹೆಚ್ಚು. ಹಾಗಾಗಿ ಅವಳು ತಾಯಿಯನ್ನು 'ಸಾವಿರ ಕೊಳ್ಳಿ ಒಲೆಯಾಗ ಇದ್ದರೂ ಜ್ಯೋತಿ ನಿನ್ನಾರು ಹೋಲಾರ, ಎಂದು ಮೆಚ್ಚುವುದು. 'ಕೊಳ್ಳಿ' ಮತ್ತು ಜ್ಯೋತಿ' ಎಂಬ ಪದಗಳ ಹೋಲಿಕೆ ಇಲ್ಲಿ ಗಮನಾರ್ಹ. 'ನೀ ಬೇಕು ನನ್ನ ತವರಿಗೆ' ಎಂಬ ಹೆಣ್ಣು ಮಗಳ ಅನಿಸಿಕೆಗೆ ಕಾರಣವೆಂದರೆ 'ತಾಯಿ ನನ ಜೀವ ಸೊಗಸಿಲ್ಲ ಬಾಳೀಯ ಹಣಿಗ್ಯಾಗ ಹಣ್ಣ ಕಳಿತ್ಹಂಗ' ಎಂದು ಆಕೆ ತನ್ನ ಅಂತರಂಗದ ದುಃಖವನ್ನು ತಾಯಿಯ ಹತ್ತಿರ ಮಾತ್ರ ತೋಡಿಕೊಳ್ಳಲು ಸಾಧ್ಯ. ಇಂತಹ ತಾಯಿ ತವರಿನಲ್ಲಿರುವುದರಿಂದ ಮಗಳಿಗೆ ಆ ದಾರಿ ಹೀಗೆ ಕಂಡಿದೆ.

ತವರೂರ ದಾರಿಲಿ ಕಲ್ಲಿಲ್ಲ ಮುಳ್ಳಿಲ್ಲ
ಸಾಸುವೆಯಷ್ಟು ಮರಳಿಲ್ಲ। ತಾಯವ್ವ
ಬಾನಲಿ ಬಿಸಿಲಿನ ಬೇಗೆ ಸುಡಲಿಲ್ಲ।

ಆಗ ಆಕೆಗೆ ಆ ದಾರಿಯಲ್ಲಿ 'ಗಿಡವೆಲ್ಲ ಮಲ್ಲಿಗಿ' ಅರಳಿದಂತಹ ಅನುಭವ ತಾಯಿಯೊಂದಿಗೆ ತನ್ನ ಮನ ಬಿಚ್ಚಿ ಮಾತನಾಡುವ ಮಗಳು, ಅಣ್ಣ ಗಂಡನ ಮನೆಯ ಸುಖದ ಬಗ್ಗೆ ಆಕೆಯನ್ನು ಕೇಳಿದ್ದಕ್ಕೆ

'ಗಂಡನ ಮನೆಯ ಚಂದ ಹೇಳೆ ತಂಗ್ಯಮ್ಮ
ಗಿಂಡಿ ಪಂಜರದ ಅರಗಿಣಿ। ಓದುತ್ತಾದ
ಚಂದಕಾಣೆ ನಮ್ಮ ಅರಮನೆ ॥

ಎಂದು ಸೂಚ್ಯವಾಗಿ ತನ್ನ ಪರಿಸ್ಥಿತಿಯನ್ನು ಹೇಳುವ ಜಾಣತನ ತೋರುತ್ತಾಳೆ.

ಎಲ್ಲ ಸಾಮಾಜಿಕ ಒತ್ತಡಗಳ ನಡುವೆಯೂ ಕೆಲವೊಮ್ಮೆ ಹೆಣ್ಣು ಮಕ್ಕಳು ತಮ್ಮ ಭಾವನೆಗಳನ್ನು ಮುಕ್ತವಾಗಿ ಹೊರಚೆಲ್ಲಿರುವುದಿದೆ. ಹೆಣ್ಣು ಮಗು ಹುಟ್ಟಿದಾಗ 'ಹೆಣ್ಣ ಹಡದಿನ ತಾಯಿ ಬಣ್ಣದ ಗೌರೀನ' ಎಂದು ವಾತ್ಸಲ್ಯವನ್ನು ತೋರಿದ್ದಿದೆ. ಆದರೂ ಗಂಡನ ಮನೆಗೆ ಹೆಣ್ಣು ಮಗುವೆಂದು ಹೇಳಿಕಳುಹಿಸಲು ಅನುಮಾನ.

ಹೆಣ್ಣು ಹುಟ್ಟ್ಯಾದಂತ ಹೇಳಿ ಕಳುವಲಿ ಬೇಡ
ಹೆಣ್ಣೆಂದರವರು ಹೆದರ್ಯಾರು। ಕಂದವ್ವ
ಹೆಣ್ಣಲ್ಲ ನಮಗೆ ರವಿಚಿನ್ನ ॥

ಆಕೆಗೆ ಹೆಣ್ಣು ಮಗುವೆಂಬ ಅಕ್ಕರೆ ಇರುವುದನ್ನು 'ರವಿಚಿನ್ನ' ಎಂಬ ಮಾತು ಸ್ಪಷ್ಟಪಡಿಸುತ್ತದೆ. ಒಬ್ಬಳು ತಾಯಿ,

ಹತ್ತು ಗಂಡ್ ಹಡಿದರ ಮತ್ತೆ ಬಂಜೆ ಅನ್ನುವ
ದಟ್ಟೀಯ ಉಡುವ ದ್ರೌಪದೀ। ಹುಟ್ಟಿದರ
ಮಕ್ಕಳ ತಾಯಿ ಅನ್ನುವರ ॥

ಎಂದು ಮಗಳಿಗಾಗಿ ಹಂಬಲಿಸುತ್ತಾಳೆ. ಬಂಜೆ ಎನ್ನಿಸಿಕೊಳ್ಳುವುದನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಮಗಳು ಬೇಕೆಂಬ ಧ್ವನಿ ಇಲ್ಲಿದೆಯಾದರೂ ಆಕೆ ಕೇಳಿದ್ದು 'ದ್ರೌಪದಿ'ಯಂತಹ ಮಗಳನ್ನೇ ವಿನಾ 'ಸೀತೆ'ಯಂಥವಳನ್ನಲ್ಲ. ಆಕೆಗೆ ಬೇಕಾದ್ದು ದ್ರೌಪದಿಯಂತೆ ಗಟ್ಟಿತನವಿರುವ ಮಗಳು. 'ಆರತಿ ಓಡಿಲಾಕ ನಾರೀಯ ಕೊಟ್ಟು ಕಡಿಮಾಡೊ' ಎಂಬಲ್ಲಿ ಆರತಿಗಾದರೂ ಒಬ್ಬಳು ಮಗಳನ್ನು ಕೊಟ್ಟ ಮೇಲೆಯೇ ಮಕ್ಕಳು ಸಾಕೆನ್ನುವ ಬೇಡಿಕೆಯಲ್ಲಿ ಮಗಳ ಬಗೆಗಿನ ಒಲವನ್ನು ಕಾಣಬಹುದು.

ಸ್ವತಃ ಮಗಳೇ ಹೇಳಿರುವ ಕೆಲವು ತ್ರಿಪದಿಗಳಂತೂ ಗಮನಾರ್ಹವಾದವು.

ಹಚ್ಚಿಕೊಂಡವ್ವಗ ಚೊಚ್ಚಿಲ ಮಗಳಾದೆ
ಬಿಟ್ಟಾಡಿಕೊಳುವ ವೈರೀಯ। ಮನೆಮುಂದೆ
ಬಿಚ್ಚುಗತ್ಯಾಗಿ ಹೊಳದೇನ ॥

ಎನ್ನುವಂತಹ ಛಲವಂತೂ ತೀರ ವಿರಳ. ಹೆಣ್ಣು ಮಕ್ಕಳಿಗೆ ತವರಲ್ಲಿ ಯಾವ ಹಕ್ಕು ಇಲ್ಲ ಎನ್ನುವಂತಹ ಕಾಲದಲ್ಲಿ

ಹುಟ್ಯಾಗ ಆರೆಮ್ಮೆ ಕೊಟ್ಟಿಗ್ಯಾಗ ಮೂರೆಮ್ಮೆ
ಕೊಟ್ಟಾರ ಕೊಡಿರೊ ನನಗೊಂದ। ಹಡೆದಪ್ಪ
ಹುಟ್ಟಿಲ್ಲೇನು ನಾನು ಮನಿಯಾಗ ॥

ಎಂದು ಹೆಣ್ಣುಮಗಳೊಬ್ಬಳು ತನ್ನ ಹಕ್ಕನ್ನು ಕೇಳಿರುವುದು ಗಮನಾರ್ಹ. ಗಂಡ ಬಿಟ್ಟವಳೆಂದು ಅನ್ನಿಸಿಕೊಳ್ಳಲು ಹಿಂಜರಿಯುವ ಸಮಾಜದಲ್ಲಿ 'ಅಳಲ್ದರಾಯ

(23ನೆ ಪುಟ ನೋಡಿ)

# ಪಿತೃಪ್ರಧಾನತೆ ಎಂದರೇನು ?

● ಕಮಲಾ ಬಾಸಿನ್

**ಪ್ರ** : ದಕ್ಷಿಣ ಏಷಿಯಾದಲ್ಲಿ ಪಿತೃಪ್ರಧಾನತೆಯ ಉಗಮದ ಬಗ್ಗೆ ಹೇಳುವಿರಾ ?

**ಉ** : ಲಿಂಗ, ಜಾತಿ ಮತ್ತು ವರ್ಗಗಳ ಸಂಬಂಧದ ಪ್ರಶ್ನೆಗಳ ಜತೆಜತೆಗೇ ಪಿತೃಪ್ರಧಾನತೆಯ ಉಗಮವನ್ನು ಅರ್ಥಮಾಡಿಕೊಳ್ಳಲು ಭಾರತದಲ್ಲಿ ನಡೆದಿರುವ ಪ್ರಯತ್ನಗಳನ್ನು ನಾನು ಬಲ್ಲೆ. ಭಾರತೀಯ ಪಿತೃಪ್ರಧಾನತೆಯ ರಾಜಕೀಯ ಚೌಕಟ್ಟನ್ನು ಕುರಿತಾದ ಒಂದು ವಿಶ್ಲೇಷಣೆಯಲ್ಲಿ ಉಮಾ ಚಕ್ರವರ್ತಿ, ಜಾತಿ ಮತ್ತು ಲಿಂಗ ಶ್ರೇಣೀಕರಣಗಳು ಬ್ರಾಹ್ಮಣಿಕ ಸಮಾಜ ವ್ಯವಸ್ಥೆಯ ಸಂಘಟನಾ ನೀತಿಗಳಾದ್ದುವು, ಇಂದು ಕಾಣುವ ಸ್ವರೂಪವೇ ಎಲ್ಲ ಸಂದರ್ಭಲ್ಲೂ ಇರಲಿಲ್ಲವಾದರೂ ಕೂಡ, ಎಂದು ವಾದಿಸುತ್ತಾರೆ. ಇವು ಕಾಲಾನುಕ್ರಮದಲ್ಲಿ ನಿಧಾನವಾಗಿ ವಿಕಸನಗೊಂಡವು. ಪ್ರಾಚೀನ ಭಾರತೀಯ ಚರಿತ್ರೆಯ ತಮ್ಮ ಅಧ್ಯಯನನನ್ನು ಆಧರಿಸಿ ಆಕೆ, ಚರಿತ್ರಾಪೂರ್ವ ಸಂಸ್ಕೃತಿಗಳಲ್ಲಿ ಉತ್ಪಾದನೆ ಮತ್ತು ಸಂತಾನೋತ್ಪತ್ತಿಯಲ್ಲಿ ಮಹಿಳೆಯರ ಪಾತ್ರಕ್ಕೊಂದು ಬೆಲೆಯಿತ್ತು ಮತ್ತು ಬೇಟೆ-ಸಂಗ್ರಹಣೆಯ ಹಂತದಲ್ಲಿ ಲಿಂಗಾಧಾರಿತ ಶ್ರಮವಿಭಜನೆ ಇರಲಿಲ್ಲ ಎಂದು ವಾದಿಸುತ್ತಾರೆ. (ಆಕೆಯ ಈ ವಿಶ್ಲೇಷಣೆ ಜರ್ಡಾ ಲರ್‌ನರ್ ಹಿಂದೆ ಚರ್ಚಿಸಿದ ದಾಟಿಗೆ ತುಂಬಾ ಹತ್ತಿರವಾಗಿದೆ.) ಆಕೆಯ ಪ್ರಕಾರ ಮೆಸೊಲಿಥಿಕ್ ಯುಗದಲ್ಲಿ ಮಧ್ಯಭಾರತದಲ್ಲಿ ಮಹಿಳೆಯರು ತಮ್ಮ ಮುಖ್ಯ ಕೆಲಸವಾದ ಸಂಗ್ರಹಣೆಯ ಜತೆಗೆ ಬೇಟೆಯಲ್ಲೂ ಭಾಗವಹಿಸುತ್ತಿದ್ದರು. ಅನೇಕ ಚರಿತ್ರಕಾರರು ನಡೆಸಿರುವ ಮಧ್ಯಭಾರತದಲ್ಲಿನ ಗುಹಾ ಚಿತ್ರಗಳ ಅಧ್ಯಯನದಿಂದ ಕಂಡುಬಂದಿರುವಂತೆ, ಬೇಟೆ-ಸಂಗ್ರಹಣೆಯ ಆರ್ಥಿಕತೆಯಲ್ಲಿ ಮಹಿಳೆಯರ ಪ್ರಾಮುಖ್ಯತೆಯು ಅವರ ಸಂತಾನೋತ್ಪತ್ತಿ ಪಾತ್ರಕ್ಕಿದ್ದ ಪ್ರಾಮುಖ್ಯತೆಯ ಕಾರಣದಿಂದಾಗಿ ಉತ್ತಮ ಸ್ಥಾನ ಪಡೆದಿತ್ತು ಎಂದು ಆಕೆ ಹೇಳುತ್ತಾರೆ. ಅಂತಹ ಸಮಾಜದಲ್ಲಿ ಸ್ತ್ರೀ ಲೈಂಗಿಕತೆಯು ಬೆದರಿಕೆ ತರುವಂತದ್ದಾಗಿರಲಿಲ್ಲ, ಮತ್ತದನ್ನು "ನಿರ್ವಹಿಸಬೇಕಾದ" ಅವಶ್ಯಕತೆ ಇರಲಿಲ್ಲ. ಮೇಲಾಗಿ, ಇಡೀ ಸಮುದಾಯ ಇದನ್ನೇ ಆಧರಿಸಿ ಬದುಕುತ್ತಿದ್ದರಿಂದ ಸ್ತ್ರೀಯರ ಸಂತಾನೋತ್ಪತ್ತಿಯ ಶಕ್ತಿಗೆ ಬಹುವಾದ ಬೆಲೆಯಿತ್ತು. ಇದು ತಾಯ್ತನ ಅಥವಾ ಜನ್ಮ ನೀಡುವಿಕೆಯಲ್ಲಿರುವ ಸ್ತ್ರೀಶಕ್ತಿಯ ಆರಾಧನೆಯನ್ನು ವಿವರಿಸುತ್ತದೆಯೆನ್ನುತ್ತಾರಾಕೆ.

ಆದೇನೇಯಾದರೂ, ಇಂತಹ ಆರಾಧನೆಯು, **ವರ್ಗ-ನಂತರದ** ಚಾರಿತ್ರಿಕ ಸಮಾಜದಲ್ಲಿ ಕ್ರಮೇಣವಾಗಿ ಪಿತೃಪ್ರಧಾನವಾದ ಸಿದ್ಧಾಂತದಿಂದ ಪಲ್ಲಟಗೊಂಡಿತು. ಆರ್ಯರು ಭೂಮಿಯ ಮೇಲೆ ದೊಡ್ಡ ರೀತಿಯಲ್ಲಿ ಹಿಡಿತ ಸಾಧಿಸುತ್ತಾ, ವರ್ಗದಲ್ಲಿ ತಮಗಿಂತ ಕೀಳೆಂದು ಭಾವಿಸಿದ ಮತ್ತು ದ್ವೇಷದಿಂದಲೇ ಕಾಣಲು ತೊಡಗಿದ ದೇಸೀಯ ಬುಡಕಟ್ಟುಗಳನ್ನು ದಾಸ್ಯಕ್ಕೊಳಪಡಿಸಿಕೊಂಡಲ್ಲಿನಿಂದ ಇದು ಪ್ರಾರಂಭವಾಗುತ್ತದೆ. ಹೀಗೆ ದಾಸರಾಗಿಸಿಕೊಂಡ ಜನಾಂಗದ ಅನೇಕ ಪುರುಷರನ್ನು ಕೊಂದು ಮಹಿಳೆಯರನ್ನು ಗುಲಾಮರಾಗಿಸಿಕೊಂಡರು. ಪ್ರಾಚೀನ ಭಾರತೀಯ ಚರಿತ್ರೆಯಲ್ಲಿ ಮೊದಲು ಗುಲಾಮೀಕರಣಗೊಂಡವರೇ ಮಹಿಳೆಯರು ಎಂದು ಉಮಾ ಚಕ್ರವರ್ತಿ ವಾದಿಸುತ್ತಾರೆ (ಜರ್ಡಾ ಲರ್‌ನರ್ ನೊಂದಿಗೆ ಈ ತಮ್ಮ ತೀರ್ಮಾನವನ್ನು ಹಂಚಿಕೊಳ್ಳುತ್ತಾರೆ.)

ಇನ್ನು ಆರ್ಯರದ್ದೇ ಜನಾಂಗದಲ್ಲಿ ಪಿತೃಪ್ರಧಾನವಾದ ಕುಟುಂಬ ತಮ್ಮ ಮಹಿಳೆಯರ ಮೇಲೆ ಒಂದು ಬಗೆಯ ನಿಯಂತ್ರಣ ಸಾಧಿಸಿತ್ತು, ಗ್ರಾಮಕ (pastoral) ಆರ್ಥಿಕತೆಯಲ್ಲಿ ಅವರು ಉತ್ಪಾದನಾಶೀಲ ಪಾತ್ರ ವಹಿಸಿದ್ದರಾದರೂ ಕೂಡ.

ಕಾಲಾಂತರದಲ್ಲಿ ಕೃಷಿಯಾಧಾರಿತ ಆರ್ಥಿಕತೆಗೆ ಬದಲಾವಣೆ ಹೊಂದಿತು. ಎರಡನೇ ನಗರೀಕರಣ ( 600 BC ) ದ ವೇಳೆಗೆ ವರ್ಗ ಮತ್ತು ಜಾತಿ ಶ್ರೇಣೀಕರಣಗಳು ಗೋಚರವಾಗತೊಡಗಿದವು. ಬ್ರಾಹ್ಮಣರು ಶಕ್ತಿಶಾಲೀ ಗುಂಪಾಗಿ ರೂಪುಗೊಳ್ಳತೊಡಗಿದರು ಮತ್ತು **ಪಿತೃ ಪ್ರಧಾನತೆಯ ಹಂದರ ಬಲಶಾಲಿಯಾಯಿತು.** ಪುರುಷರು ಮಹಿಳೆಯರ ಮೇಲೆ ನಿಯಂತ್ರಣ ಸಾಧಿಸಿದ ಮತ್ತು ಆ ಪ್ರಕ್ರಿಯೆಯಲ್ಲಿ ಉಂಟಾದ ಸೆಡವು-ಆತಂಕಗಳು **ರಿಗ್‌ವೇದದಲ್ಲಿ** ಅಲ್ಲಲ್ಲಿ ಉಲ್ಲೇಖಗಳ ರೂಪದಲ್ಲಿ ಕಂಡು

ಬರುತ್ತದೆ, ಹೆಣ್ಣು ದೇವತೆ ಮತ್ತು ಗಂಡು ದೇವತೆಗಳ ನಡುವಿನ ದ್ವೇಶದ ರೂಪದಲ್ಲಿ. ಮಹಿಳೆಯರು ಬಲ ಪಡೆದುಕೊಳ್ಳದಿರುವುದನ್ನು ದೃಢಪಡಿಸುತ್ತಾ, ಪುರುಷರಿಗೆ ಅಧೀನವಾಗಿದ್ದುಕೊಂಡು ಅವರನ್ನು ವಿಧೇಯತೆಯಿಂದ ಅನುಸರಿಸಬೇಕೆಂದು ಸಲಹಿಸುವ ಅನೇಕ ಉಲ್ಲೇಖಗಳಿವೆ. ಅದೇ ಸಮಯದಲ್ಲಿ ಕೆಲವು ಬುಡಕಟ್ಟುಗಳನ್ನು ದಾಸ್ಯಕ್ಕೊಳಪಡಿಸಿದ್ದು ಮತ್ತು ಅವರನ್ನು ಗುಲಾಮರನ್ನಾಗಿ ಮಾರ್ಪಡಿಸಿದ್ದು ಅವರ ಶ್ರಮ ಕೃಷಿ ಉತ್ಪಾದನೆಗೆ ದಕ್ಕುವಂತಾಯಿತು. ಆರ್ಯ ಜನಾಂಗದ ಮಹಿಳೆಯನ್ನು **ಮನೆಯೊಳಗಡೆ ಮಿತಿಗೊಳಿಸಿಬಿಡಲಾಯಿತು ಮತ್ತು ಆರ್ಥಿಕ ಉತ್ಪಾದನೆಯಲ್ಲಿ ನೇರ ಸಂಪರ್ಕದಿಂದ ಅವರನ್ನು ಬೇರ್ಪಡಿಸಲಾಯಿತು.**

ಏಂಗಲ್ಸ್‌ರಂತೆ ಉಮಾ ಚಕ್ರವರ್ತಿ ಕೂಡ, ಖಾಸಗಿ ಆಸ್ತಿಯ ಸ್ಥಾಪನೆ ಮತ್ತು ಜಾತಿ ಮಡಿವಂತಿಕೆಗಳಿಗೆ ಮಹಿಳೆಯರನ್ನು ದಾಸ್ಯಕ್ಕೊಳಪಡಿಸುವುದು ಮತ್ತು ಅವರ ಚಲನ-ವಲನ ಮತ್ತು ಲೈಂಗಿಕತೆಯ ಮೇಲೆ ಕಟ್ಟುನಿಟ್ಟಿನ ನಿಯಂತ್ರಣ ಹೊಂದುವುದು ಅಗತ್ಯವಾಗಿತ್ತೆಂದು ವಾದಿಸುತ್ತಾರೆ. ಈ ನಿಯಂತ್ರಣವು ಮೂರು ವಿಭಿನ್ನ ಸಾಧನಗಳ ಮೂಲಕ ಮೂರು ವಿಭಿನ್ನ ಹಂತಗಳಲ್ಲಿ ಕಾರ್ಯಶೀಲಗೊಂಡಿತು. ಮೊದಲನೆಯ ಸಾಧನವೆಂದರೆ ಸಿದ್ಧಾಂತ (Ideology), ಮಹಿಳೆಯರು 'ಪತಿವ್ರತಾ' ಕಲ್ಪನೆಯನ್ನು ಆಂತರಿಕಗೊಳಿಸಿಕೊಂಡದ್ದು. "ಮಹಿಳೆಯರು ತಮ್ಮತನದ ಅಭಿವ್ಯಕ್ತಿಯಾಗಿ ಶೀಲ ಮತ್ತು ಪತಿವ್ರತಾ ಕಲ್ಪನೆಗಳನ್ನು ಒಪ್ಪಿಕೊಂಡದ್ದೂ ಅಲ್ಲದೆ ಅದಕ್ಕಾಗಿ ಆಶಿಸುವಂತಾಯಿತು. ಅದು ಸ್ವಯಂ ಹೇರಿಕೆಗೆ ಒಳಪಟ್ಟಿದ್ದರಿಂದ, ಶ್ರೇಣೀಕೃತ ಮತ್ತು ತೀವ್ರ ಅಸಮಾನತೆಯ ಸಾಮಾಜಿಕ ಸ್ಥಿತಿಯು ಮೇಲ್ಜಾತಿಯ ಮಹಿಳೆಯರಿಂದ ಪುಷ್ಟೀಕರಿಸಲ್ಪಟ್ಟಿತು; ಅವರ ದಾಸ್ಯವು ಯಶಸ್ವಿಯಾಗಿ ಅಗೋಚರೀಕರಿಸಲ್ಪಟ್ಟಿತು ಮತ್ತು ಇದರೊಂದಿಗೆ ಪಿತೃಪ್ರಧಾನತೆಯೇ ತೀರ ಸಹಜವೇನೋ ಎಂಬಂತೆ ಗಟ್ಟಿಯಾಗಿ ತಳವೂರಿಕೊಂಡಿತು."

ಎರಡನೆಯ ಸಾಧನವೇ ಕಾನೂನು ಮತ್ತು ಸಂಪ್ರದಾಯ. ಬ್ರಾಹ್ಮಣಿಕ ಸಾಮಾಜಿಕ ಶಾಸನ ಹೇಳುವಂತೆ ಚಂಚಲೆಯರಾದ ಮಹಿಳೆಯರನ್ನು ಪಿತೃಪ್ರಧಾನತೆಯು ಹಿಡಿತದಲ್ಲಿಡಬೇಕು. ಮೂರನೆಯ ಸಾಧನವೆಂದರೆ ರಾಜ್ಯ (state). ಸಂಬಂಧಪಟ್ಟ ಪುರುಷ ತನ್ನ ಸ್ತ್ರೀಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಸೋತರೆ ರಾಜ್ಯವೇ ಆ ಕೆಲಸವನ್ನು ಮಾಡುತ್ತದೆ. ಅಂತಿಮವಾಗಿ **ಪಿತೃಪ್ರಧಾನತೆಯನ್ನು ಕೇವಲ ಒಂದು ಸಿದ್ಧಾಂತಕ್ಕಿಂತ ಹೆಚ್ಚಾಗಿ ತೀರಾ ಸಹಜ ಸ್ಥಿತಿಯೆಂಬಂತೆ ಸ್ಥಾಪಿತಗೊಳಿಸಿದ್ದೇ ಪ್ರಾಚೀನ ರಾಜ್ಯ.**

ಬೇರೆ ಬೇರೆ ವರ್ಗಗಳು, ಜಾತಿಗಳು ಮತ್ತು ಪ್ರದೇಶಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಮೌಲ್ಯಗಳಲ್ಲಿನ ಭಿನ್ನತೆಗಳನ್ನು ಮತ್ತು ವೈರುಧ್ಯಗಳನ್ನು ಉಮಾ ಚಕ್ರವರ್ತಿ ಗುರುತಿಸುವರಾದರೂ, "ಜಾತಿ-ವರ್ಗಪೂರ್ವ ಬ್ರಾಹ್ಮಣಿಕ ಸಮಾಜವು ಸ್ತ್ರೀ-ಶಕ್ತಿಯನ್ನು ತಾಯಿಯೆನ್ನುವುದಕ್ಕೆ ಮಿತಿಗೊಳಿಸಿ, ಶೀಲ ಮತ್ತು ಪಾತಿವ್ರತ್ಯಗಳಿಂದಾಗಿ ಬರುವ ಶಕ್ತಿಯಲ್ಲಿ ಅವನ್ನು ನೆಲೆಗೊಳಿಸಿತು. ಪುರಾಣಗಳಲ್ಲಿ ತಾಯ್ತನಕ್ಕಿಂತ ಪತ್ನಿತ್ವವೇ ಮೇಲುಗೈ ಪಡೆದಿದ್ದು ಭಾರತದಲ್ಲಿ ಸ್ತ್ರೀ-ಐಡೆಂಟಿಯನ್ನು ಕಟ್ಟಿಕೊಡುವ ಸಾಧನವಾಯಿತು. ಮತ್ತು ಇಂತಹ ಆದರ್ಶದ ಕಲ್ಪನೆಗಳ ಮೂಲಕ ಮಹಿಳೆಯರ ಲೈಂಗಿಕತೆ ಒಂದು ನ್ಯಾಯಬದ್ಧ ಮಿತಿಯೊಳಗೆ ಹಿಡಿದಿಡಲ್ಪಟ್ಟಿತು."

ಉಮಾ ಚಕ್ರವರ್ತಿಯವರ ಪ್ರಕಾರ ಇಂದಿನ ಭಾರತದ ಹಿಂದೂ ಸಮಾಜವಲ್ಲಿ ಇಂತಹ ದಿಶ್ವಾತ್ಮಕ ಗ್ರಹಿಕೆ (ವರ್ಗ ಪೂರ್ವ ಸ್ತ್ರೀತ್ವ ಮತ್ತು ಜಾತಿ-ವರ್ಗ ನಂತರದ ಸ್ತ್ರೀತ್ವ) ಮುಂದುವರೆದಿದೆ. ಜನ್ಮ ನೀಡುವ ಶಕ್ತಿಯು ಸ್ವಯಂನಿಯಂತ್ರಣ ಮತ್ತು ಪಾತಿವ್ರತ್ಯಗಳ ಕಲ್ಪನೆಗಳ ಜತೆಗೇ ಇಂದಿಗೂ ಪುರುಷ ಮತ್ತು ಮಹಿಳೆಯರಿಂದ ಪೂಜಿಸಲ್ಪಡುತ್ತದೆ.

ಜರ್ಡಾ ಲರ್‌ನರ್‌ರಂತೆ, ಉಮಾ ಚಕ್ರವರ್ತಿ ಕೂಡ ಪಿತೃಪ್ರಧಾನತೆಯು ದಯಾಪರವಾದುದ್ದಾಗಿದ್ದು, ಇಲ್ಲಿ ವಿಧೇಯ ಮಹಿಳೆಯರಿಗೆ ಕೆಲವು ವಿಶೇಷ ಸವಲತ್ತುಗಳು, ವಿನಾಯಿತಿಗಳು ಮತ್ತು ಭದ್ರತೆಗಳು ಉಂಟು ಎಂದು ನಂಬುತ್ತಾರೆ. ಈ ಉದಾರ ನೀತಿಯು ಅದೇ ಸಮಯದಲ್ಲಿ ದಾಸ್ಯವನ್ನು ಅಗೋಚರಗೊಳಿಸಿ ಅದನ್ನು ಸಹಜ ಸ್ಥಿತಿಯನ್ನಾಗಿಸಿದೆ.

ತಾವು ಕೀಳೆಂಬುದನ್ನು ಆಂತರಿಕಗೊಳಿಸಿಕೊಳ್ಳುವಂತೆ ಮಾನಸಿಕವಾಗಿ ತಯಾರುಗೊಳಿಸಲ್ಪಟ್ಟದ್ದ ಕಾರಣದಿಂದಾಗಿ ಬೇರೆಲ್ಲಿಯಂತೆ ಭಾರತದಲ್ಲೂ ಮಹಿಳೆಯರು ತಮ್ಮ ಗುಲಾಮೀಕರಣದ ಪ್ರಕ್ರಿಯೆಯಲ್ಲಿ

ತಾವೂ ಸಕ್ರಿಯವಾಗಿ ಭಾಗವಹಿಸಿದ್ದೇ ಅಲ್ಲದೆ ಶೀಲ **ಮತ್ತು ಪಾತಿವ್ರತ್ಯಗಳ ಮೂಲಕ ತಮ್ಮ ಸಶಕ್ತತೆ ಯಾಗುತ್ತದೆಂಬ ನಂಬಿಕೆಗೆ ಅವರನ್ನು ಸಾಮಾಜಿಕವಾಗಿ ಪಕ್ಕಾಗಿಸಲಾಯಿತು.** ತ್ಯಾಗದ ಮೂಲಕ ಅವರು ತಾವು ಬಲ ಮತ್ತು ಉತ್ತಮಿಕೆ ಯನ್ನು ಕಂಡುಕೊಂಡರು. **ಹೀಗಾಗಿ ಅವರು ತಮ್ಮ ಕೀಳರಿಮೆ ಮತ್ತು ದೌರ್ಬಲ್ಯಗಳಿಂದ ಬಲ ವನ್ನು ಸೃಷ್ಟಿಸಿಕೊಂಡರು;** ಶ್ರೀಮಂತವಾದ ಮತ್ತು ಕಲ್ಪನಾತ್ಮಕವಾದ **ಪುರಾಣಗಳ ಮೂಲಕ, ನಿಜ ವಾದ ಶಕ್ತಿಯು ಮಹಿಳೆಯರ ತ್ಯಾಗಮಾಡುವ ಸಾಮರ್ಥ್ಯದಲ್ಲಿದೆ, ಅಧಿಕಾರದಿಂದ ದೂರವಿದ್ದು ಆಧ್ಯಾತ್ಮಿಕ ಶಕ್ತಿಯನ್ನು ಪಡೆಯುವುದರಲ್ಲಿದೆ ಎನ್ನುವಂತಹ ಸಿದ್ಧಾಂತವನ್ನು ಸುಮ್ಮನೆ ಒಪ್ಪಿ ಕೊಳ್ಳುವಂತೆ ಮಾಡಲಾಯಿತು.** ಪುರಾಣಗಳಲ್ಲಿ ಸಾಂಸ್ಕೃತಿಕ ಮಾದರಿಗಳು ಪುನರೋಕ್ತಿಗೊಳ್ಳುತ್ತಾ ಮಹಿಳೆಯರು ತಮ್ಮಲ್ಲಿ **ವಿಭಿನ್ನವಾದ** ಮತ್ತು **ವಿಶೇಷವಾದ** ಶಕ್ತಿಯಿದೆ, ಆಧ್ಯಾತ್ಮಿಕವಾದ ಮತ್ತು ದೊಡ್ಡ ಮಟ್ಟದ ಶಕ್ತಿಯಿದೆ, ತಮ್ಮ ಗಂಡಂದಿರನ್ನು ದುರಾದೃಷ್ಟಗಳಿಂದ ಕಾಪಾಡುವ ಮತ್ತು ಅವರ ಪಾಪಗಳನ್ನು ತೊಳೆಯಬಲ್ಲಂತ ಶಕ್ತಿಯಿದೆ ಎಂದೆಲ್ಲ ನಂಬುವಂತೆ ಮಾಡಿತು. ಪಿತೃಪ್ರಧಾನತೆಯ ಉದಾರ ನೀತಿ ಮತ್ತು ಪುರಾಣಗಳಲ್ಲಿನ ಸ್ತ್ರೀತ್ವದ ಸಾಂಸ್ಕೃತಿಕ ಮಾದರಿಗಳು ಒಟ್ಟಾಗಿ ಕೆಲಸ ಮಾಡುತ್ತಾ, **ಮಹಿಳೆ ಯರ ದಾಸ್ಯವನ್ನು ಅದು ದಾಸ್ಯವೇ ಅಲ್ಲದ ಒಂದು ಅತ್ಯಂತ ಸಹಜ ಸ್ಥಿತಿ ಎಂಬಂತೆ ರೂಪಿಸಿ ದವು.**

ಸರಿಸುಮಾರು ಎರಡು ದಶಕಗಳಿಂದ ಇಂಡಿಯಾದಲ್ಲಿ ವಾಸಿಸುತ್ತಾ ಕೆಲಸ ಮಾಡುತ್ತಿರುವ ಇನ್ನೊಬ್ಬ ಸ್ತ್ರೀವಾದಿ ವಿದ್ವಾಂಸೆ ಗೇಲ್ ಓಮೆಡ್ತ್ ಅವರು ಪಿತೃಪ್ರಧಾನತೆಯ ಉಗಮವನ್ನು ಕುರಿತಂತ ಬೇರೆ ಬೇರೆ ಭಾರತೀಯ ಮತ್ತು ಪಾಶ್ಚಿಮಾತ್ಯ ಥಿಯರಿಗಳನ್ನು ಅಭ್ಯಸಿಸಿದ್ದಾರೆ. ಆಕೆ ಹೀಗೆ ಅಭಿಪ್ರಾಯ ಪಡುತ್ತಾರೆ :

1. ಅತ್ಯಂತ ಪ್ರಾಚೀನ ಮಾನವ ಸಮಾಜಗಳು (ಪಾಲಿಯೋಲಿಥಿಕ್ ಯುಗ ಮತ್ತು ಪಾಲಿಯೋ ಲಿಥಿಕ್ ಪೂರ್ವ ಯುಗ) ಒಂದೋ ಸ್ತ್ರೀಕೇಂದ್ರಿತ ಸಮಾಜಗಳಾಗಿದ್ದವು, ಇಲ್ಲವೇ ಲಿಂಗರಹಿತವಾದು ವಾಗಿದ್ದವು.
2. ರಾಜ್ಯಾಂಗ ಪೂರ್ವ ಯುಗದಲ್ಲಿನ ಕುಲ ಸಂಬಂಧೀ ಸಮಾಜಗಳು ಸ್ಪಷ್ಟವಾಗಿ ಸಮಾನತೆಯ ಸ್ವರೂಪ ವನ್ನು ಹೊಂದಿದ್ದವು. ರಾಜ್ಯದ ಉಗಮ ಮತ್ತು ಆದರ ಮೇಲೆ ಪಿತೃ ಪ್ರಧಾನತೆಯ ಪ್ರಭಾವದ ನಂತರವೂ ಅವು ಕುಲಸಂಬಂಧೀ ಜಾಲಗಳ ಮೂಲಕ ಮಹಿಳೆಯರಿಗೆ ಸಾಕಷ್ಟು ಸ್ವಾಯತ್ತತೆ ಮತ್ತು ಅಧಿಕಾರಗಳನ್ನು ಒದಗಿಸಿಕೊಟ್ಟವು.
3. ಆರ್ಥಿಕ ಅಸಮಾನತೆ, ಮಿಲಿಟರಿ, ಪರಕೀಯವಾದ ಧರ್ಮಗಳು ಇತ್ಯಾದಿಗಳನ್ನೊಳಗೊಂಡ ರಾಜ್ಯ ನಿರ್ಮಿತ ವರ್ಗ ಸಮಾಜದ ಉಗಮದ ಪ್ರಕ್ರಿಯೆ ಯಲ್ಲಿ ಮೊಟ್ಟ ಮೊದಲ ಬಾರಿಗೆ ಮಹಿಳೆಯರ ಸಂಪೂರ್ಣ ಗುಲಾಮೀಕರಣ ಉಂಟಾಯಿತು. ಇದನ್ನೇ ಸ್ತ್ರೀವಾದಿ ವಿದ್ವಾಂಸರು "ಪಿತೃಪ್ರಧಾನತೆ"–ಮಹಿಳೆ ಯರ ಫಲಶಕ್ತಿ, ಲೈಂಗಿಕತೆ ಮತ್ತು ಶ್ರಮಶಕ್ತಿಯ ಮೇಲೆ ಪುರುಷರ ನಿಯಂತ್ರಣ, ಎಂದು ವಿವರಿಸಿ ದ್ದಾರೆ.

ಜರ್ಡಾ ಲರ್‌ನರ್ ಮತ್ತು ಉಮಾ ಚಕ್ರವರ್ತಿಯ ರಂತ ಗೇಲ್ ಓಮೆಡ್ತ್ ಕೂಡ, ಆರ್ಥಿಕತೆಯಲ್ಲಿ ಭಾಗ ವಹಿಕೆ, ಕ್ರೌರ್ಯದ ಪಾತ್ರ ಮತ್ತು ಒತ್ತಾಯ ಮತ್ತು ಸಿದ್ಧಾಂತಗಳೇ ಮುಂತಾದ ಅನೇಕ ಅಂಶ ಗಳು ಪಿತೃ ಪ್ರಧಾನತೆಯ ನಿರ್ಮಾಣಕ್ಕೆ ಕಾರಣ ವಾದವು ಎಂದು ನಂಬುತ್ತಾರಾದರೂ ತನ್ನ ತೀರ್ಮಾನ ಗಳಲ್ಲಿ ಆಕೆ ಹೆಚ್ಚು ಆಶಾವಾದಿ. "ಸಮಾಜ ಪುರುಷ ಸ್ವರೂಪೀ ಎಂದು ಸಿಮನ್ ಡಿ ಬುವಾರ್ ಹೇಳಿದ್ದು ತಪ್ಪು. ರಾಜ್ಯಾಧಿಕಾರ, ವರ್ಗ ಶೋಷಣೆಗಳು ಪುರುಷ ಸ್ವರೂಪಿಯಾಗಿರಬಹುದು ಆದರೆ ರಾಜ್ಯರಹಿತ, ವರ್ಗ ರಹಿತ ಮತ್ತು ಲಿಂಗರಹಿತ ಸಮಾಜಗಳು ಸಾಧ್ಯ : ಅವು ಹಿಂದೆಯೂ ಇದ್ದವು ಮತ್ತು ಮುಂದೆಯೂ ಇರುತ್ತವೆ."

ವಿವಿಧ ಸಮಾಜಗಳು ಮತ್ತು ಸಂಸ್ಕೃತಿಗಳೆಲ್ಲಕ್ಕೂ ಒಪ್ಪಿತವಾಗುವಂತಹ ಮತ್ತು ಅನ್ವಯವಾಗುವಂತಹ ಪಿತೃಪ್ರಧಾನತೆ ಅಥವಾ ಅದರ ಉಗಮವನ್ನು ಕುರಿತ ಯಾವುದೇ ಒಂದು ಥಿಯರಿ ಇಲ್ಲ ಎಂಬ ಸ್ಪಷ್ಟ ಅಂಶವನ್ನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ, "ಪಿತೃಪ್ರಧಾ ನತೆಯೆನ್ನುವ ಪಾರಿಭಾಷಕವು ಪ್ರಯೋಗಾತ್ಮಕತೆಯ

ಹಂತದಲ್ಲೇ ಮುಖ್ಯವಾಗಿ ಕೆಲಸ ಮಾಡುತ್ತದೆ. ಒಂದು ವ್ಯವಸ್ಥೆಯಾಗಿ ಪಿತೃಪ್ರಧಾನತೆಯು ತಿರುಳೇನು, ಅದು ಹೇಗೆ ಕೆಲಸ ಮಾಡುತ್ತದೆ, ಉತ್ಪಾದನಾ ಸಂಬಂಧಗಳು ಇಲ್ಲವೇ ಉತ್ಪಾದನಾ ವಿಧಾನಗಳ ಜತೆಗೆ ಅದು ಯಾವ ಬಗೆಯ ಪಾರಸ್ಪಾರಿಕತೆಯನ್ನು ಹೊಂದಿದೆ ಎಂಬುದನ್ನು ಅದು ನಮಗೆ ಹೇಳುವುದಿಲ್ಲ. ಲೈಂಗಿಕತೆ ಅಥವಾ ಫಲ ಶಕ್ತಿ ಅಥವಾ ಶ್ರಮ ತುಂಬಾ ಮುಖ್ಯವಾದುದೇ ? ಫೆಮಿನಿಸ್ಟ್ ವಿದ್ವಾಂಸರು ಈ ಕುರಿತು ತಮ್ಮಲ್ಲೇ ಭಿನ್ನತೆಗಳನ್ನು ಉಳ್ಳವರಾಗಿದ್ದಾರೆ" ಎನ್ನುತ್ತಾರೆ ಗೋಲ್ ಒಮೆಡ್ತ್.

**ಉಪಸಂಹಾರ**

ಒಂದು ಒಟ್ಟಾರೆಯಲ್ಲಿ, ದಕ್ಷಿಣ ಏಶಿಯಾದಲ್ಲಿನ ಬಹುಪಾಲು ಮಹಿಳಾ ಗುಂಪುಗಳು ಸೋಷಿಯಲಿಸ್ಟ್ ಸ್ತ್ರೀವಾದಿ ನಿಲುವನ್ನು ಒಪ್ಪಿಕೊಳ್ಳುತ್ತವೆ. ಅಂದರೆ, ಪಿತೃಪ್ರಧಾನತೆ ಮತ್ತು ವರ್ಗ ಶೋಷಣೆಗಳೆರಡೂ ಮುಖ್ಯ, ಅವೆರಡಕ್ಕೂ ಸಂಬಂಧವಿದೆ, ಅನೇಕ ಸಂದರ್ಭಗಳಲ್ಲಿ ಒಂದಕ್ಕೊಂದು ಒತ್ತಾಸೆಯಾಗಿವೆ, ಮತ್ತು ಮಹಿಳೆಯರು ಪಿತೃಪ್ರಧಾನವಾದ ಮತ್ತು ಜಾತಿವರ್ಗಗಳಾಧಾರಿತ ವ್ಯವಸ್ಥೆಯನ್ನೂ ಏಕಕಾಲಕ್ಕೆ ಎದುರಿಸುತ್ತಾ ಸವಾಲಾಗಬೇಕಾಗುತ್ತದೆ.

ದಕ್ಷಿಣ ಏಷಿಯಾದಲ್ಲಿ ಕಳೆದ ಮೂರು ದಶಕಗಳ ಸಮಯದಲ್ಲಿ, ಮಹಿಳೆಯರು ಮತ್ತವರ ಸಂಘಟನೆಗಳು ಅನೇಕ ರೀತಿಯಲ್ಲಿ ಪಿತೃಪ್ರಧಾನತೆಗೆ ಸವಾಲಾಗಿದ್ದಾರೆ ; ಅವರ ಪ್ರತಿಭಟನೆ ಸ್ಥಳೀಯವಾದುದ್ದಾಗಿರಬಹುದು, ಅಲ್ಲಲ್ಲಿ ಕಂಡುಬಂದಿರಬಹುದು, ತಕ್ಷಣದ ಪ್ರತಿಕ್ರಿಯೆಯ ರೂಪದಲ್ಲಿರಬಹುದು ಇಲ್ಲವೇ ಮಹಿಳಾ ಸಂಘಟನೆಗಳ ಮೂಲಕ ಅಥವಾ ಇತರೆ ರಾಜಕೀಯ, ಸಾಮಾಜಿಕ ಚಳವಳಿಗಳು, ಟ್ರೇಡ್ ಯೂನಿಯನ್‌ಗಳೊಂದಿಗಿನ ಸಹಯೋಗದ ಮೂಲಕ ವ್ಯವಸ್ಥಿತವಾಗಿ ಚಿಂತಿಸಿ, ಸಂಯೋಜಿಸಿ ಕೈಗೊಂಡಿದ್ದಾಗಿರಬಹುದು. ಒಂದು ಬಗೆಯಲ್ಲಿ, ಪಿತೃ ಪ್ರಧಾನತೆಯನ್ನು ಮಹಿಳೆಯರು ಸೈದ್ಧಾಂತೀಕರಿಸಿದ ರೀತಿ, ಒಂದು ವ್ಯವಸ್ಥೆಯಾಗಿ ಅದನ್ನು ವಿಶ್ಲೇಷಿಸಿ, ವ್ಯವಸ್ಥೆಯನ್ನು ಮುರಿಯುವಲ್ಲಿನ ಅವರ ಪ್ರಯತ್ನಗಳೇ ಒಂದು ಶಕ್ತಿಯಾಲಿಯಾದ ಸವಾಲಾಗಿವೆ. ಅಂತಿಮವಾಗಿ ಅನೇಕ ಹಂತಗಳಲ್ಲಿ-ಅಕಡೆಮಿಕ್, ತಳಮಟ್ಟ, ಪ್ರಾಂತೀಯ ಮತ್ತು ಅಂತರರಾಷ್ಟ್ರೀಯ ಮತ್ತು ಒಂದು ಒಟ್ಟಾರೆಯಲ್ಲಿ ಸಮಾಜದಲ್ಲಿ ಕ್ರಿಯೆಗಾಗಿ ಈ ವಿಶ್ಲೇಷಣೆಯ ಬಳಕೆ ಮಹಿಳೆಯರ ದಾಸ್ಯದ ಪ್ರಶ್ನೆಯನ್ನು ಬಹುತೇಕ ರಾಷ್ಟ್ರೀಯ ಪರ್ಯಾವಲೋಚನಾ ವಿಷಯಗಳ ಭಾಗವಾಗಿಸಿದೆ.

ಕಳೆದ ಎರಡು ದಶಕಗಳಿಗಿಂತಲೂ ಹೆಚ್ಚು ಕಾಲದಿಂದ ಮಧ್ಯಮ ವರ್ಗ ಮತ್ತು ದುಡಿಯುವ ವರ್ಗದ ಪಟ್ಟಣ ಮತ್ತು ಗ್ರಾಮೀಣ ಮಹಿಳೆಯರು ಸಣ್ಣ ಮತ್ತು ದೊಡ್ಡ ಗುಂಪುಗಳಲ್ಲಿ, ಅಧ್ಯಯನ ಕ್ಯಾಂಪುಗಳಲ್ಲಿ ಮತ್ತು ಶಿಬಿರಗಳಲ್ಲಿ, ಔಪಚಾರಿಕ ಮತ್ತು ಅನೌಪಚಾರಿಕ ಸಭೆಗಳಲ್ಲಿ ತಮ್ಮ ತುಳಿತದ ಮತ್ತು ಪುರುಷಾಧಿಕಾರದ ಸ್ವರೂಪಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ಒಟ್ಟಿಗೆ ಬಂದಿದ್ದಾರೆ.

ಪಿತೃ ಪ್ರಧಾನತೆಯೆಡೆಗೆ ಇಂತಹ ಸಾಮೂನ್ಯೀಕೃತ ಪ್ರತಿಭಟನೆಯಲ್ಲದೆ, ಮಹಿಳೆಯರು ಬಿಡಿಬಿಡಿಯಾಗಿ ಇಲ್ಲವೇ ಮಹಿಳಾ ಸಂಘಟನೆಗಳಾಗಿ ಮಾಧ್ಯಮಗಳು, ವಿಚಾರ ಸಂಕಿರಣಗಳು, ತರಬೇತಿಗಳ ಮುಖಾಂತರ ಪಿತೃಪ್ರಧಾನ ಐಡಿಯಾಲಜಿಯ ವಿವಿಧ ಆಯಾಮಗಳನು ಪ್ರಶ್ನಿಸಿದ್ದಾರೆ. ಮಹಿಳೆಯರು ಒಳಪಟ್ಟಿರುವ ವಿವಿಧ ಬಗೆಯ ಕ್ರೌರ್ಯಗಳನ್ನು ವಿಶ್ಲೇಷಿಸಿ ಪ್ರತಿಭಟಿಸಿದ್ದಾರೆ, ಕಾನೂನುಗಳಲ್ಲಿ ಬದಲಾವಣೆ ತರಲು, ಈಗಿರುವ ಕಾನೂನುಗಳ ಪರಿಣಾಮಕಾರೀ ಕಾರ್ಯಾಚರಣೆಗೆ, ಮಹಿಳೆಯರ ಮೇಲಾಗುವ ಕ್ರೌರ್ಯವನ್ನು ನೋಡಲಿಕ್ಕಾಗಿ ವಿಶೇಷ ಪೋಲೀಸ್ ಸೆಲ್‌ಗಳನ್ನು ತರುವಂತೆ ಒತ್ತಾಯ ತಂದಿದ್ದಾರೆ. ಕಿರುಕುಳಕ್ಕೆ ಒಳಗಾದ ಹೆಂಗಸರಿಗೆ ಬೆಂಬಲ ಗುಂಪುಗಳನ್ನು ಮತ್ತು ಸ್ವಲ್ಪ ಕಾಲ ತಂಗಲು ಸಾಧ್ಯವಾಗುವಂತಹ ಸ್ಥಳಗಳನ್ನು ಸೃಷ್ಟಿಸಿದ್ದಾರೆ.

ಮಹಿಳೆಯರು ವ್ಯಕ್ತಿಗತವಾಗಿ, ಮಹಿಳಾ ಗುಂಪುಗಳು ಮತ್ತು ಸ್ತ್ರೀವಾದಿ ವಿದ್ವಾಂಸರು ನಮ್ಮ ದೇಶಗಳಲ್ಲಿನ ಆರೋಗ್ಯ, ಶಿಕ್ಷಣ, ಮತ್ತು ಕಾನೂನು ವ್ಯವಸ್ಥೆಗಳಲ್ಲಿನ ಪಿತೃಪ್ರಧಾನವಾದ ಪೂರ್ವಗ್ರಹಿಕೆಗಳು ಮತ್ತು ಲಿಂಗ ಭೇದಗಳನ್ನು ಪ್ರಶ್ನಿಸಿದ್ದಾರೆ ಮತ್ತು ಈ ವ್ಯವಸ್ಥೆಗಳಲ್ಲಿ ಹೆಚ್ಚು ಲಿಂಗಸಮಾನತೆ ತರಲು ಅನೇಕ ಕಾಂಪೈನ್‌ಗಳನ್ನು ಮಾಡಿದ್ದಾರೆ. ದಕ್ಷಿಣ ಏಷಿಯಾದ ಬಹುತೇಕ ಎಲ್ಲ ದೇಶಗಳಲ್ಲಿ ಮಹಿಳಾ ಗುಂಪುಗಳು ಮಾಧ್ಯಮದಲ್ಲಿನ ಲಿಂಗ ತಾರತಮ್ಯವನ್ನು ವಿಶ್ಲೇಷಿಸಿ, ಅವು ಸೃಷ್ಟಿಸುವ ಸ್ತ್ರೀ ಮಾದರಿಗಳಿಂದುಂಟಾಗುವ ಪರಿಣಾಮವನ್ನು

ಪರೀಕ್ಷಿಸಿ ಪರ್ಯಾಯಗಳನ್ನು ಸಲಹಿಸಿವೆ. ಹಾಗೆಯೇ ಮಹಿಳಾ ಗುಂಪುಗಳು ಮತ್ತು ಸ್ತ್ರೀವಾದೀ ಸಂಶೋಧಕರು ಅಭಿವೃದ್ಧಿ ಪಾಲಿಸಿಗಳು ಮತ್ತು ಯೋಜನೆಗಳು ಮಹಿಳೆಯರ ಮೇಲೆ ಉಂಟುಮಾಡುವ ಪರಿಣಾಮವನ್ನು ಅಭ್ಯಸಿಸಿದ್ದಾರೆ ಮತ್ತು ಪಾಲಿಸಿಗಳನ್ನು ರೂಪಿಸುವಲ್ಲಿ– ಕಾರ್ಯಗತಗೊಳಿಸುವಲ್ಲಿ ತಮ್ಮ ರಾಷ್ಟ್ರದ ಸರ್ಕಾರಗಳ ಜತೆ ವ್ಯವಹರಿಸಿದ್ದಾರೆ.

(ಮುಗಿಯಿತು)

(ಕಮಲಾ ಬಾಸಿನರ **ಪಿತೃ ಪ್ರಧಾನತೆ ಎಂದರೇನು ?** ಎಂಬ ಕಿರುಪುಸ್ತಿಕೆಯನ್ನು ಮಾನಸ ಸಂಪಾದಕೀಯ ಮಂಡಳಿ ಅನುವಾದಿಸಿದೆ)

WHAT IS PATRIARCHY ?
by Kamla Bhasin
Pub : Kali for women
New Delhi 1992

●

---

## ಜನಪದ ತ್ರಿಪದಿಗಳಲ್ಲಿ ಹೆಣ್ಣು

( 16ನೇ ಪುಟದಿಂದ )

ಮಡದೀಗೆ ಬಿಟ್ಟರೆ ಬಾಳೆಹಣ್ಣೇನೂ ಕೆಡಲಾಕೆ' ಎನ್ನುವಂತಹ ಧೈರ್ಯ ಮೆಚ್ಚುವಂತಹುದೇ ಆಗಿದೆ.

ಪುರುಷ ಪ್ರಧಾನ ಸಮಾಜದ ಚೌಕಟ್ಟಿನೊಳಗಿನ ಮೌಲ್ಯಗಳನ್ನು ವಿಧೇಯತೆಯಿಂದ ಒಪ್ಪಿರುವ ಹೆಣ್ಣು ಮಕ್ಕಳು ಆ ನೆಲೆಯಲ್ಲಿಯೇ ತಮ್ಮ ಅಂತರಂಗವನ್ನು ತೆರೆದಿಟ್ಟಿರುವುದರಿಂದಲೇ ಇವು 'ಗರತಿಯ ಹಾಡುಗಳು'. ಗರತಿಯನ್ನು ಸಂಸ್ಕೃತಿಯ ವಾಹಕಳನ್ನಾಗಿ ಸಮಾಜ ಪರಿಭಾವಿಸುವುದರಿಂದ ಒಪ್ಪಿತ ಮೌಲ್ಯಗಳ ಹಿನ್ನೆಲೆಯಲ್ಲಿಯೇ ಆಕೆ ಆಲೋಚಿಸಬೇಕು. ತನ್ನ ಭಾವನೆಗಳನ್ನು ವ್ಯಕ್ತಪಡಿಸಬೇಕು. ಅಂತಹ 'ಸ್ತ್ರೀ ಮಾದರಿ'ಗಳನ್ನು ಮಾತ್ರ 'ಗರತಿ'ಯೆಂದು ಗುರುತಿಸುತ್ತದೆ. (ಈಗಲೂ ಹೆಚ್ಚಿನ ಬದಲಾವಣೆಯನ್ನೇನೂ ಕಾಣಲಾರೆವು) ಇಂತಹ ಬದ್ಧತೆಯೊಳಗೆ ಬದುಕಿರುವ ಹೆಣ್ಣು ಮಕ್ಕಳು ಒಮ್ಮೊಮ್ಮೆ ಅದನ್ನು ಧಿಕ್ಕರಿಸಿ ತಮ್ಮ ನೋವು, ಅನಿಸಿಕೆಗಳನ್ನು ವ್ಯಕ್ತಪಡಿಸಿರುವುದು ಗಮನೀಯ ಅಂಶ. ಎಲ್ಲ ಕಾಲದಲ್ಲಿಯೂ ಆಯಾ ಕಾಲದ ಸಮಾಜ ಒಪ್ಪಿರುವ ಮೌಲ್ಯಗಳನ್ನು ಪ್ರಶ್ನಿಸುವ ದನಿ ಕ್ಷೀಣವಾಗಿಯಾದರೂ ಜೀವಂತವಾಗಿತ್ತು ಎನ್ನುವುದು ಇದರಿಂದ ಸುಸ್ಪಷ್ಟ.

●

---

## ಓದಿರಿ

# ಸ್ತ್ರೀವಾದಿ ಸಾಹಿತ್ಯ ವಿಮರ್ಶೆ

ಸಂಪಾದಕರು : ತೇಜಸ್ವಿನಿ ನಿರಂಜನ
ಸೀಮಂತಿನಿ ನಿರಂಜನ

ಪ್ರಕಾಶಕರು : **ಕನ್ನಡ ಸಂಘ**
ಕ್ರೈಸ್ಟ್ ಕಾಲೇಜು
ಬೆಂಗಳೂರು

ಬೆಲೆ : **120**/– ರೂ.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

ವಿಳಾಸ :
" ಮಾ ನ ಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067